# ಡಾ. ಜಿ. ಎಸ್. ಶಿವರುದ್ರಪ್ಪ

ಡಾ. ಸಿ. ಮಹದೇವ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಡಾ. ಜಿ. ಎಸ್. ಶಿವರುದ್ರಪ್ಪ

ಡಾ. ಸಿ. ಮಹದೇವ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**Dr. G. S. Shivarudrappa** - By Dr. C. Mahadeva, published by Dr. Karigowda, Beechanahalli, Director, Prasaranga, Kannada University Hampi, Vidyaranya, Kamalapura - 583 221, Pages : viii+50, Rs. 15/-

First Edition 1995

**ನಮ್ಮವರು ಪುಸ್ತಕಮಾಲೆ – ೪**



ಮುಖಪುಟ ವಿನ್ಯಾಸ : ಕೆ. ಮಕಾಳಿ

ಪ್ರಕಾಶಕರು
**ಡಾ. ಕರೀಗೌಡ ಬೀಚನಹಳ್ಳಿ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಾಮಲಾಪುರ-೫೮೩ ೨೨೧

**ಬೆಲೆ : ಹದಿನೈದು ರೂಪಾಯಿಗಳು**

ಮುದ್ರಕರು
ನೇತ್ರಾ ಪ್ರಿಂಟರ್ಸ್
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

# ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಪರಿವಿಡಿ

# ಡಾ. ಜಿ.ಎಸ್. ಶಿವರುದ್ರಪ್ಪ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಡಾ.ಜಿ.ಎಸ್.ಎಸ್. ಎಂದು ಪ್ರಖ್ಯಾತರಾಗಿರುವ ಡಾ. ಶಿವರುದ್ರಪ್ಪ ಗುಗ್ಗರಿ ಶಾಂತವೀರಪ್ಪನವರು ೧೯೨೬ರ ಫೆಬ್ರವರಿ ೭ ರಂದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಈಸೂರು ಗ್ರಾಮದಲ್ಲಿನ ಜಿ. ಶಾಂತವೀರಪ್ಪ ಮತ್ತು ವೀರಮ್ಮ ಎಂಬ ದಂಪತಿಗಳಿಗೆ ಮಗನಾಗಿ ಹುಟ್ಟಿದರು. ತಂದೆ ಮಾಧ್ಯಮಿಕ ಶಾಲೆಯ ಉಪಾಧ್ಯಾಯರು. ಬಾಲ್ಯದಲ್ಲೆ ತಾಯಿಯನ್ನು ಕಳೆದುಕೊಂಡು ಜಿ.ಎಸ್.ಎಸ್. ಮಲತಾಯಿಯ ಪೋಷಣೆಯಲ್ಲಿ ಬೆಳೆದರು. ದೊಡ್ಡ ಸಂಸಾರ, ಬಡತನ ಹೀಗಾಗಿ ಜಿ.ಎಸ್.ಎಸ್. ತಮ್ಮ ಬಾಲ್ಯಾವಸ್ಥೆಯಲ್ಲೆ ಜೀವನದ ಕಹಿಯನ್ನು ಅನುಭವಿಸಿದ್ದಾರೆ.

ತಂದೆ ಶಾಂತವೀರಪ್ಪನವರಿಗೆ ಆಗಾಗ್ಗೆ ಬೇರೆ ಬೇರೆ ಸ್ಥಳಗಳಿಗೆ ವರ್ಗಾವಣೆ ಆಗುತ್ತಿದ್ದುದರಿಂದ ಜಿ.ಎಸ್.ಎಸ್. ಅವರ ವಿದ್ಯಾಭ್ಯಾಸ ಬೇರೆ ಬೇರೆ ಸ್ಥಳಗಳಲ್ಲಿ ನಡೆಯಿತು. ಬಾಲ್ಯದಿಂದಲೇ ಓದುವ ಅಭಿರುಚಿಯನ್ನು ಬೆಳೆಸಿಕೊಂಡರು. ಇದಕ್ಕೆ ಕಾರಣ ತಂದೆ ಉಪಾಧ್ಯಾಯರಾಗಿದ್ದರಿಂದ ಆಯಾಯ ಶಾಲೆಗಳ ಗ್ರಂಥಾಲಯಗಳ ಉಪಯೋಗವನ್ನು ಪಡೆದುಕೊಂಡದ್ದು. ಜಿ.ಎಸ್.ಎಸ್ ಅವರ ಎಳೆಯ ಮನಸ್ಸಿನ ಮೇಲೆ ಕಾರಂತರ 'ಬಾಲ ಪ್ರಪಂಚ' ಹಾಗೂ 'ಗೋವಿನ ಕಥೆ' ಕೃತಿಗಳು ಅಗಾಧವಾದ ಪರಿಣಾಮ ಬೀರಿದವು.

ಜಿ.ಎಸ್.ಎಸ್. ಹೊನ್ನಾಳಿ ಮತ್ತು ಕೋಟೆಹಾಳಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು, ರಾಮಗಿರಿ ಮತ್ತು ಬೆಲಗೂರಿನಲ್ಲಿ ಮಾಧ್ಯಮಿಕ ಶಿಕ್ಷಣವನ್ನು, ದಾವಣಗೆರೆ ಮತ್ತು ಗುಬ್ಬಿಯಲ್ಲಿ ಪ್ರೌಢಶಾಲೆಯ ಶಿಕ್ಷಣವನ್ನು ಪಡೆದರು. ಸೆಕೆಂಡರಿ ಶಾಲೆಯ ಶಿಕ್ಷಣವನ್ನು ಮುಗಿಸಿದ ಜಿ.ಎಸ್.ಎಸ್.ಗೆ ನೌಕರಿಯೊಂದನ್ನು ಕೊಡಿಸುವುದರ ಮೂಲಕ ಕುಟುಂಬದ ಹೊರೆಯನ್ನು ಕಡಿಮೆ ಮಾಡಿಕೊಳ್ಳಬಹುದೆಂದು ತಂದೆ ಶಾಂತವೀರಪ್ಪ ನವರ ಲೆಕ್ಕಾಚಾರವಾಗಿತ್ತು. ಈ ಸಂಬಂಧವಾಗಿ ಬೆಂಗಳೂರಿನ ಮುನಿಸಿಪಾಲಿಟಿಯಲ್ಲಿ ಕಂದಾಯ ವಸೂಲಿ ಗುಮಾಸ್ತೆಯ ಹುದ್ದೆಗೆ ಸಂದರ್ಶನ ಕರೆಬಂದಿತು. ಸಂದರ್ಶನ ನಡೆಸಿದ ಅಧಿಕಾರಿಗಳು ಈ ಸಣ್ಣ ಹುಡುಗನನ್ನು ನೋಡಿ ನಕ್ಕು, ಹೆಚ್ಚು ವಿದ್ಯಾಭ್ಯಾಸ ಕೊಡಿಸುವಂತೆ ಅವರ ತಂದೆಗೆ ಸಲಹೆ ಮಾಡಿದರು. ನಂತರ ತುಮಕೂರಿನಲ್ಲಿ ಇಂಟರ್

ಮೀಡಿಯೆಟ್ ಶಿಕ್ಷಣವನ್ನು ಮುಂದುವರಿಸಿದ ಜಿ.ಎಸ್.ಎಸ್. ಊಟ ಮತ್ತು ವಸತಿಗಾಗಿ ಅಲ್ಲಿನ ಶ್ರೀ ಸಿದ್ದಗಂಗೆ ಮಠದಲ್ಲಿ ಆಶ್ರಯ ಪಡೆದರು. ಆಗ ಭಾರತದಲ್ಲಿ ಅಸಹಕಾರ ಚಳುವಳಿ (೧೯೪೨) ಪ್ರಾರಂಭವಾಗಿತ್ತು. ಇದರಿಂದ ಶಿಕ್ಷಣ ಮುಂದುವರಿಸಲಾಗದೆ ಊರಿಗೆ ಹೋಗಬೇಕಾಯಿತು. ಮರುವರ್ಷ ತಮ್ಮ ಶಿಕ್ಷಣವನ್ನು ಮುಂದುವರಿಸಿದ ಜಿ.ಎಸ್.ಎಸ್. ಆ ವೇಳೆಗಾಗಲೇ ಅನೇಕ ಭಾವಗೀತೆಗಳನ್ನು ರಚಿಸಿದ್ದರು. ಬಹುಮಟ್ಟಿಗೆ ಏಕಾಂತ ವಾಸಿಗಳಾಗಿದ್ದು ಇವರು ಕಾಲೇಜಿನ ಯಾವುದೇ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಲಿಲ್ಲ.

ಬೇಸಿಗೆಯ ರಜಾ ದಿನಗಳಲ್ಲಿ ಜಿ. ಎಸ್. ಎಸ್. ಅವರು ಸರ್ಕಾರಿ ಕಛೇರಿಗಳಲ್ಲಿ ಕೆಲಸ ಮಾಡಿ ಅಲ್ಪ ಸ್ವಲ್ಪ ಹಣವನ್ನೂ ಗಳಿಸುತ್ತಿದ್ದರು. ಕಾಲದ ಮಹತ್ವವನ್ನು ಆಗಲೇ ಅರಿತುಕೊಂಡಿದ್ದರು. ಇಂಟರ್ ಮೀಡಿಯೇಟ್ ಶಿಕ್ಷಣದ ನಂತರ ಹೆಚ್ಚಿನ ಓದಿಗಾಗಿ ಮೈಸೂರಿಗೆ ಹೋಗಬೇಕಾಯಿತು. ತಂದೆಗೆ ಇದು ಹೊರೆಯಾಗಿ ಕಂಡು ಬಂದಿತು. ಮಗನನ್ನು ಯಾವುದಾದರೊಂದು ಸರ್ಕಾರಿ ಉದ್ಯೋಗಕ್ಕೆ ಕಳುಹಿಸಲೇ ಬೇಕು ಎಂದು ನಿರ್ಧಾರ ಮಾಡಿದರು. ಗುಬ್ಬಿಯ ಅಮಲ್ದಾರರನ್ನು ಕಂಡು ಮಗನಿಗೆ ಕೆಲಸವನ್ನು ಕೊಡಿಸುವಲ್ಲಿ ಯಶಸ್ವಿಯಾದರು. ಜಿ.ಎಸ್.ಎಸ್. ತಮ್ಮ ಪಾಲಿನ ಕರ್ತವ್ಯವನ್ನು ಸಮಥವಾಗಿ ನಿರ್ವಹಿಸಿ ಎಲ್ಲರ ಮೆಚ್ಚುಗೆ ಪಡೆದರು. ಪರಿಣಾಮವಾಗಿ ಕೆಲಸ ಖಾಯಂಗೊಂಡಿತು. ನಂತರ ಆಹಾರ ಇಲಾಖೆಗೆ ವರ್ಗಾವಣೆಗೊಂಡ ಇವರು ಯಾವುದೇ ಪ್ರಲೋಭನೆಗಳಿಗೆ ಒಳಗಾಗದೆ ಅತ್ಯಂತ ಪ್ರಾಮಾಣಿಕವಾಗಿ ಸೇವೆ ಸಲ್ಲಿಸಿದರು. ಒಮ್ಮೆ ರಜೆಗಾಗಿ ಮೇಲಾಧಿಕಾರಿಗಳಿಗೆ ಪತ್ರ ಬರೆದುಕೊಂಡಾಗ ರಜೆಯನ್ನು ನಿರಾಕರಿಸಲಾಯಿತು. ರಜೆಯ ಅವಶ್ಯಕತೆಯನ್ನು ವಿವರಿಸಿದರೂ ಮೇಲಾಧಿಕಾರಿ ಒಪ್ಪಲಿಲ್ಲ. ಆಗ ಜಿ.ಎಸ್.ಎಸ್. ತಮ್ಮ ಹುದ್ದೆಗೆ ರಾಜಿನಾಮೆ ನೀಡಿ ಹೊರಬಂದರು. ಇದು ಅವರ ತಂದೆಗೆ ಬೇಸರ ತಂದಿರುವುದರಲ್ಲಿ ಅನುಮಾನವಿಲ್ಲ. ಮುಂದೆ ಓದಬೇಕೆಂಬ ಆಪೇಕ್ಷೆ ಅವರನ್ನು ಮೈಸೂರಿಗೆ ಕರೆದೊಯ್ಯಿತು.

೧೯೪೪ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನ ಕನ್ನಡ ಆನರ್ಸ್ ತರಗತಿಗೆ ಸೇರಿದರು. ಅವರಿಗೆ ಮುಂದೆ ಮುಖ್ಯವಾಗಿ ವಸತಿ ಮತ್ತು ಊಟದ ಸಮಸ್ಯೆಗಳು ಎದುರಾದವು. ಅದಕ್ಕಾಗಿ ಅವರು ಸುತ್ತೂರು ಮಠವನ್ನು ಆಶ್ರಯಿಸಿದರು. ಕೆಲವೇ ದಿನಗಳಲ್ಲಿ ವಸತಿ ಸರಿ ಬೀಳದೆ ಸುಬ್ಬಯ್ಯ ರೋಡಿನಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ಪಡೆದರು. ಅಲ್ಲಿ ಗೆಳೆಯರೊಡಗೂಡಿ ಎಣ್ಣೆ ನೀರಿನ ಸ್ನಾನ ಮಾಡಲು ಪ್ರಯತ್ನ ಪಟ್ಟ ಸಂದರ್ಭವನ್ನು ಅವರ ಗೆಳೆಯ ಸುಬ್ರಹ್ಮಣ್ಯಂ ಅವರು ತಮ್ಮ ಲೇಖನದಲ್ಲಿ ಹಾಸ್ಯಮಯವಾಗಿ ಚಿತ್ರಿಸುತ್ತಾರೆ. ಕೆಲವು ದಿನಗಳ ನಂತರ ಅಲ್ಲಿಂದ ಬೆಟ್ಟದಪುರದ ಹಾಸ್ಟೆಲಿಗೆ ಸ್ಥಳಾಂತರ ಮಾಡಿದರು. ಮೊದಲ ವರ್ಷದ ಕನ್ನಡ ಆನರ್ಸ್ ತರಗತಿಗೆ ಹನ್ನೊಂದು ಮಂದಿ ವಿದ್ಯಾರ್ಥಿಗಳಿದ್ದರು. ಆಗ ಕನ್ನಡ ಸ್ಥಿತಿ ಶೋಚನೀಯವಾಗಿತ್ತು. ಇಂಗ್ಲಿಷರ ದಬ್ಬಾಳಿಕೆಯ ಕಾಲ ಇನ್ನು ನಡೆದಿತ್ತು. ಅವರನ್ನು

ದೇಶದಿಂದ ತೊಲಗಿಸುವ ಚಳುವಳಿ ಬಿರುಸಾಗಿದ್ದರೂ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯಗಳ ಮೇಲಿನ ಪ್ರೀತಿ ಕಡಿಮೆಯಾಗಿರಲಿಲ್ಲ. ಲಿಟರೇಚರ್ ಎಂದರೆ ಇಂಗ್ಲಿಷ್ ಲಿಟರೇಚರ್ ಎಂಬ ಭಾವನೆಯಿತ್ತು. ಕನ್ನಡದಲ್ಲಿ ಮಾತನಾಡಿದರೆ ಏನೋ ಅಪಚಾರ ಮಾಡಿದಂತೆ ಎಂಬ ಪರಿಸ್ಥಿತಿ ನಿರ್ಮಾಣವಾಗಿತ್ತು. ಇಂತಹ ಸ್ಥಿತಿಯಲ್ಲಿ ಕನ್ನಡವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು ಅಧ್ಯಯನ ಮಾಡುವುದೆಂದರೆ ಕೆಲವರಿಗೆ ಅಪಹಾಸ್ಯದ ಮಾತಾಗಿತ್ತು.

ಈ ಮೇಲಿನ ಸಂದರ್ಭದಲ್ಲಿ ಮಹಾರಾಜ ಕಾಲೇಜಿಗೆ ಕುವೆಂಪು ಅವರು ಪ್ರಾಚಾರ್ಯರಾಗಿ ಬಂದರು. ಆಗ ಕನ್ನಡ ಅಧ್ಯಯನದ ವಿದ್ಯಾರ್ಥಿಗಳಿಗೆ ಒಂದು ರೀತಿಯಲ್ಲಿ ಆನೆ ಬಲ ಬಂದಂತಾಯಿತು. ಕನ್ನಡವನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಿದ್ದವರ ಉಸಿರು ಬರು ಬರುತ್ತಾ ಕಟ್ಟಿ ಹೋಗುವಂತಾಯಿತು. ನಂತರ ಜಿ.ಎಸ್. ಎಸ್. ಅವರಿಗೆ ಕುವೆಂಪು ಅವರ ಶಿಷ್ಯರಾಗುವ ಅಪೂರ್ವ ಅವಕಾಶ ದೊರೆಯಿತು. ಕುವೆಂಪು ಅವರು ತರಗತಿಯಲ್ಲಿ ತಾವು ಮಾಡಿದ ಕಾವ್ಯಮೀಮಾಂಸೆಯ ಪಾಠವನ್ನು ಪುನರಾವಲೋಕನ ಮಾಡುವುದಕ್ಕಾಗಿ ಜಿ.ಎಸ್.ಎಸ್. ಅವರ ಟಿಪ್ಪಣಿಯ ಪುಸ್ತಕವನ್ನು ಕೇಳಿ ಪಡೆಯುತ್ತಿದ್ದರಂತೆ. ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ಜಿ.ಎಸ್.ಎಸ್. ತಮ್ಮ ಪದ್ಯವೊಂದಕ್ಕೆ ಬಿ.ಎಂ.ಶ್ರೀ ಯವರ ಪದಕವನ್ನು ಪಡೆದರು. ಇದನ್ನು ಕುವೆಂಪು ಪ್ರಧಾನ ಮಾಡಿದರು. ನಂತರ ಜಿ.ಎಸ್.ಎಸ್. ಅವರ ಎಲ್ಲಾ ಕವನಗಳನ್ನು ತರಿಸಿಕೊಂಡು ಓದಿ ತಮ್ಮ ಸಲಹೆ ಸೂಚನೆಗಳನ್ನು ನೀಡಿ ಅವುಗಳನ್ನು 'ಪ್ರಬುದ್ಧ ಕರ್ಣಾಟಕ' ದಲ್ಲಿ ಪ್ರಕಟವಾಗುವಂತೆ ವ್ಯವಸ್ಥೆ ಮಾಡಿದರು.

ಈ ನಡುವೆ ಜಿ.ಎಸ್.ಎಸ್. ಅವರು ತಮ್ಮ ಸ್ನೇಹಿತರೊಡನೆ ಕೆಲವು ದಿನಗಳ ಕಾಲ ಗರಡಿಮನೆಗೆ ಹೋಗಿ ಬರುತ್ತಿದ್ದರು. ಅಲ್ಲಿ ಅಂಗಸಾಧನೆ ಮಾಡಿ ಸಮರ್ಪಕವಾದ ಆಹಾರವಿಲ್ಲದೆ ನಿಶ್ಯಕ್ತರಾಗಿ ಬಿದ್ದು ಎದ್ದು ಮನೆ ಸೇರಿ ಗರಡಿ ಮನೆಗೆ ನಮಸ್ಕಾರ ಹೇಳಿದ್ದು ಸ್ವಾರಸ್ಯಕರವಾದ ಘಟನೆಯಾಗಿದೆ.

ಕನ್ನಡ ಆನರ್ಸ್ ಎರಡನೇ ವರ್ಷದ ಪರೀಕ್ಷೆಗೆ ಗೊತ್ತುಪಡಿಸಿದ್ದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ವಿಷಯದಲ್ಲಿ ಹೊಯ್ಸಳ ವಾಸ್ತುಶಿಲ್ಪದ ಬಗ್ಗೆ ಪ್ರಶ್ನೆ ಕೇಳಬಹುದೆಂದು ಗ್ರಹಿಸಿದ ಜಿ.ಎಸ್.ಎಸ್. ಸಮೀಪದ ಸೋಮನಾಥಪುರಕ್ಕೆ ಹೋಗಿ ಅಲ್ಲಿನ ಹೊಯ್ಸಳ ವಾಸ್ತುಶಿಲ್ಪ ಸೌಂದರ್ಯವನ್ನು ಮನನ ಮಾಡಿಕೊಂಡರು. ನಿರೀಕ್ಷೆಯಂತೆ ಪ್ರಶ್ನೆ ಕೇಳಲಾಗಿ ಪರೀಕ್ಷೆಯಲ್ಲಿ ಚೆನ್ನಾಗಿ ಬರೆದರು. ಇದು ಅವರ ಶಿಸ್ತುಬದ್ಧವಾದ ಅಧ್ಯಯನದ ಒಂದು ಉದಾಹರಣೆ. ಅವರು ತಾವಾಯಿತು, ತಮ್ಮ ವ್ಯಾಸಂಗವಾಯಿತು - ಮತ್ತಾವ ಗೋಜಿಗೆ ಹೋದವರಲ್ಲ. ಅಲ್ಲಿ ಕುವೆಂಪು, ತೀ.ನಂ.ಶ್ರೀಕಂಠಯ್ಯ, ದೊ.ಲ. ನರಸಿಂಹಾಚಾರ್ಯ, ವಿ. ಸೀತಾರಾಮಯ್ಯ, ತ.ಸು. ಶಾಮರಾಯ ಮುಂತಾದ ಗುರುಗಳ ಸಂಪರ್ಕದಲ್ಲಿ ಚೆನ್ನಾಗಿ ಪಳಗಿದ್ದರು. ಬಿ.ಎ. (ಆನರ್ಸ್) ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನ

ಪಡೆದರು (೧೯೪೯). ಪ್ರಥಮ ವೈಸ್ ಛಾನ್ಸಲರ್ ಎಸ್.ವಿ. ನಂಜುಂಡಯ್ಯನವರ ಸುವರ್ಣಪದಕವನ್ನು ಪಡೆದರು. ಕುವೆಂಪು ಅವರ ಶಿಷ್ಯನಾಗಿ ನಾನು ಏನು ಕಲಿತೆ ನೆಂಬುದನ್ನು ಜಿ.ಎಸ್.ಎಸ್. ಈ ರೀತಿ ತಿಳಿಸುತ್ತಾರೆ. "ಯಾರಿಗೂ ತಲೆಬಾಗದೆ ನಿಲ್ಲು ವಂಥ ಕೆಚ್ಚು ಧೈರ್ಯಗಳನ್ನು ನಾನು ಕಂಡದ್ದು ಪುಟ್ಟಪ್ಪನವರಲ್ಲಿ. ನಿಜವಾಗಲು ಕನ್ನಡ ಸಾಹಿತ್ಯದ ಸತ್ವವನ್ನು ಮೈಗೂಡಿಸಿಕೊಂಡರೆ ವ್ಯಕ್ತಿತ್ವಕ್ಕೆ ಯಾವ ತೇಜಸ್ಸು ಬರುತ್ತದೆ ಎಂಬುದನ್ನು ನಾನು ಅವರಲ್ಲಿ ಕಂಡೆ. ಪುಟ್ಟಪ್ಪನವರು ಹೊಸ ಹೊಸ ದೃಷ್ಟಿಯ ಬೀಗದ ಕೈ ಕೊಟ್ಟಿದ್ದಾರೆ. ಕನ್ನಡ ಸಾಹಿತ್ಯವನ್ನು ನೋಡುವ ಬೇರೆ ಒಂದು ದೃಷ್ಟಿ ಯನ್ನು ನನಗೂ ನನ್ನಂಥ ಅನೇಕರಿಗೂ ಅವರು ಕೊಟ್ಟರು." ಹಾಗೆಯೇ ತಮ್ಮ ಮತ್ತೊಬ್ಬ ಗುರುಗಳಾದ ತ.ಸು. ಶಾಮರಾಯರನ್ನು ಬಹಳವಾಗಿ ನೆನೆಸಿಕೊಳ್ಳುವ ಜಿ.ಎಸ್.ಎಸ್. "ನನ್ನ ಅಸ್ತವ್ಯಸ್ತವಾದ ಬದುಕಿನಲ್ಲಿ ಅವರಿಂದ ಆಗಿರುವ ಉಪಕಾರವನ್ನು ಈ ಜನ್ಮದಲ್ಲಿ ಎಣಿಸಿ ಮುಗಿಸುವುದು ನನ್ನಿಂದ ಸಾಧ್ಯವಿಲ್ಲ" ಎಂದು ತಿಳಿಸುತ್ತಾರೆ.

ಮೈಸೂರಿನಲ್ಲಿ ಬಿ.ಎ. (ಕನ್ನಡ) ಆನರ್ಸ್ ಮುಗಿಸಿದ ನಂತರ ಜಿ.ಎಸ್.ಎಸ್. ಉದ್ಯೋಗಕ್ಕೆ ಹೋಗುವ ಆಲೋಚನೆ ಮಾಡಿದರು. ಆಗ ದಾವಣಗೆರೆಯ ಧರ್ಮ ರತ್ನಾಕರ ಮದ್ದುರಾಮಪ್ಪ ಕಾಲೇಜಿನಲ್ಲಿ ಖಾಲಿ ಇದ್ದ ಅಧ್ಯಾಪಕ ಹುದ್ದೆಗೆ ಸೇರಿ ಕೊಂಡರು. ಅದೇ ಮೊದಲಾದ್ದರಿಂದ ಕಾಲೇಜಿನ ತರಗತಿಗೆ ಹೋಗಲು ಯಾವ ರೀತಿಯ ಉಡುಪು ಧರಿಸಬೇಕೆಂಬ ಸಮಸ್ಯೆ ಹುಟ್ಟಿಕೊಂಡಿತು. ಪ್ರಾರಂಭದಲ್ಲಿ ಕೆಲವು ಸ್ನೇಹಿತರ ಸಲಹೆಯಂತೆ ಸೂಟು ಧರಿಸಿದರೂ ಅಂತಿಮವಾಗಿ ಕಚ್ಚೆಪಂಚೆ ತೊಡುವತ್ತ ಹೆಚ್ಚು ವಾಲಿದರು. ಒಳ್ಳೆಯ ಸಮರ್ಥ ಅಧ್ಯಾಪಕರೆಂಬ ಹೆಸರನ್ನು ಪಡೆದರು. ಆಗ ಇವರ ಶಿಷ್ಯರಾಗಿದ್ದ ಡಾ.ಎಂ. ಚಿದಾನಂದಮೂರ್ತಿಯವರು "ಜಿ.ಎಸ್.ಎಸ್. ಅವರ ಪಾಠದ ದೊಡ್ಡ ಗುಣವೆಂದರೆ ತನ್ಮಯತೆ. ವಿದ್ಯಾರ್ಥಿಗಳಿಗೆ ತಿಳಿಯಿತೊ ಇಲ್ಲವೋ ಅದು ಅವರಿಗೆ ಆಗ ಮುಖ್ಯವಾಗಿರಲಿಲ್ಲ. ಅವರು ನಮ್ಮನ್ನು ಎದುರಿಸಿ ಎಂದರೆ ನಮ್ಮನ್ನು ನೋಡುತ್ತ ಪಾಠ ಮಾಡುತ್ತಿದ್ದರೆಂದು ಈಗ ಅನ್ನಿಸುತ್ತಿಲ್ಲ. ಪಕ್ಕಕ್ಕೆ ತಿರುಗಿ ಎಲ್ಲೋ ನೋಡುತ್ತ ಏನನ್ನೋ ಕಲ್ಪಿಸುತ್ತ ತಮಗೆ ತಾವೇ ಪಾಠ ಹೇಳಿಕೊಳ್ಳುತ್ತಿದ್ದರು. ನಾವು ಕುಳಿತು ಕೇಳುತ್ತಿದ್ದೆವು. ಅವರ ಪಾಠಗಳನ್ನು ನಾವೆಲ್ಲ ಬಹಳವಾಗಿ ಮೆಚ್ಚಿಕೊಂಡಿದ್ದೆವು" ಎಂದು ಬರೆಯುತ್ತಾರೆ.

ದಾವಣಗೆರೆ ಕಾಲೇಜಿನಲ್ಲಿದ್ದಾಗ ತಮ್ಮ ಬಿಡುವಿನ ವೇಳೆಯಲ್ಲಿ ವಿದ್ಯಾರ್ಥಿಗಳಿಗೆ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಕಾವ್ಯವನ್ನು ಓದಿ ವಿವರಿಸುತ್ತಿದ್ದರು. ಅಲ್ಲಿನ ಜಯದೇವ ವಿದ್ಯಾರ್ಥಿ ನಿಲಯದ ವಾರ್ಡನ್ ಆಗಿ ಊಟದ ಅವ್ಯವಸ್ಥೆಯನ್ನು ಸುಧಾರಿಸಿದರು. ವಿದ್ಯಾರ್ಥಿಗಳ ಕ್ಷೇಮ ಚಿಂತಕರಾಗಿ ಅನೇಕ ಸಮಸ್ಯೆಗಳನ್ನು ಆಡಳಿತ ವರ್ಗಕ್ಕೆ ತಿಳಿಸಿ ಪರಿಹರಿಸಿದರು. ಅಲ್ಲದೆ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಬೆಳೆಸಲು ಬಹುವಾಗಿ ಶ್ರಮಿಸಿದರು. ರಾತ್ರಿವೇಳೆ ಅವರ ಅಪ್ಪಣೆ ಇಲ್ಲದೆ ಸಿನಿಮಾಕ್ಕೆ ಹೋಗುವಂತಿರಲಿಲ್ಲ. ಅವರಿಗೆ ಹೆದರಿ ಅವರ ಅಪ್ಪಣೆಯನ್ನು ಯಾರೂ ಕೇಳುತ್ತಿರಲಿಲ್ಲವಂತೆ. ಅಲ್ಲಿದ್ದಾಗಲೆ

ಅವರ ವಿವಾಹ ನಿಶ್ಚಯವಾಯಿತು. ಮದುವೆಯು ರುದ್ರಾಣಿಯಮ್ಮ ಎಂಬುವರೊಡನೆ ಹಾದಿಕೆರೆಯಲ್ಲಿ ನಡೆಯಿತು. ಆಗ ಅವರಿಗೆ ಬರುತ್ತಿದ್ದ ಸಂಬಳ ೧೧೮ ರೂಪಾಯಿ. ಇದರಲ್ಲಿ ೧೫ ರೂ. ಜೀವವಿಮೆಗೆ, ೪೦ ರೂ. ಮನೆ ಬಾಡಿಗೆಗೆ ಹೋಗಿ ಉಳಿದ ಅರವತ್ತ ಮೂರು ರೂಪಾಯಿಗಳಲ್ಲಿ ಜೀವನ ನಡೆಸಬೇಕಾಗಿತ್ತು. ಆದರೆ ಇವೆಲ್ಲವನ್ನೂ ಮರೆತು ಭಾವ ಗೀತೆಗಳನ್ನು ರಚಿಸುತ್ತಿದ್ದರು. ಬಡತನದಲ್ಲೂ ತೃಪ್ತಿಯನ್ನು ಕಂಡಿದ್ದರು.

೧೯೫೧ರಲ್ಲಿ ಪುನಃ ಮೈಸೂರಿಗೆ ಬಂದ ಜಿ.ಎಸ್.ಎಸ್. ಮೈಸೂರಿನ ಯುವರಾಜ ಕಾಲೇಜಿಗೆ ಅಧ್ಯಾಪಕ ಹಾಗೂ ಎಂ.ಎ. ತರಗತಿಗೆ ವಿದ್ಯಾರ್ಥಿಯಾಗಿ ಸೇರಿದರು. ಆಗ ಪ್ರಭುಶಂಕರ, ಪ್ರಭುಪ್ರಸಾದ, ವೆಂಕಟರಾವ್, ಸುಬ್ಬರಾವ್ ಇವರದೇ ಆದ ಒಂದು ಚಿಕ್ಕ ಬಳಗವಿತ್ತು. ಆ ಸಮಯದಲ್ಲಿ ಇವರ ಮೊದಲ ಕವನ ಸಂಕಲನ'ಸಾಮಗಾನ' ತ.ಸು. ಶಾಮರಾಯರು ಆರಂಭಿಸಿದ್ದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆಯಲ್ಲಿ ಪ್ರಕಟಗೊಂಡಿತು. ಕುವೆಂಪುರವರು ಜಿ.ಎಸ್.ಎಸ್. ಅವರ ಕವನದ ಲಾಲಿತ್ಯ, ಭಾಷಾ ಶುದ್ಧಿ, ಅರ್ಥ ಸಂಪತ್ತುಗಳನ್ನು ಮೆಚ್ಚಿಕೊಂಡಿದ್ದರು. ೧೯೫೩ರಲ್ಲಿ ಎಂ.ಎ. ಪರೀಕ್ಷೆಯಲ್ಲಿ ವಿಶ್ವವಿದ್ಯಾಲಯಕ್ಕೆ ಪ್ರಥಮ ಸ್ಥಾನ ಪಡೆದು ತೇರ್ಗಡೆ ಹೊಂದಿದರು. ಇದರಿಂದ ಅವರಿಗೆ ಬಿ.ಎಂ.ಶ್ರೀ ರಜತ ಪದಕ ಹಾಗೂ ಕೇಣಿಸಿದ್ದಪ್ಪ ಸುವರ್ಣ ಪದಕಗಳು ದೊರೆತವು. ಅನಂತರ ಜಿ.ಎಸ್.ಎಸ್. ಶಿವಮೊಗ್ಗೆಗೆ ವರ್ಗವಾಗಿ ಹೋದರು.

೧೯೫೫ರಲ್ಲಿ ಶಿಷ್ಯವೇತನ ದೊರತು ಪಿಎಚ್.ಡಿ. ಪದವಿಗಾಗಿ 'ಸೌಂದರ್ಯ ಸಮೀಕ್ಷೆ' ಎಂಬ ಪ್ರೌಢ ನಿಬಂಧವನ್ನು ಬರೆದು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದರು. ಕುವೆಂಪು ಅವರು ಮಾರ್ಗದರ್ಶಕರಾಗಿದ್ದ ಈ ಮಹಾನಿಬಂಧಕ್ಕೆ ೧೯೬೦ರಲ್ಲಿ ಜಿ.ಎಸ್.ಎಸ್. ಅವರಿಗೆ ಪಿಎಚ್.ಡಿ. ಪದವಿ ದೊರೆಯಿತು. ಪ್ರಾಚ್ಯ ಪಾಶ್ಚಾತ್ಯ ಕಲಾವಿಮರ್ಶಕರ, ಮುಖ್ಯವಾಗಿ ಕನ್ನಡ ಕವಿಕುಲದ ಸೌಂದರ್ಯ ಪ್ರಜ್ಞೆಯನ್ನು ಕುರಿತು ಈ ಉದ್ಗ್ರಂಥವು ಇಂದಿಗೂ ಒಂದು ಉತ್ತಮ ಸಂದರ್ಭ ಗ್ರಂಥವಾಗಿರುತ್ತದೆ. ಈ ಸಂಶೋಧನೆಯಲ್ಲಿ ಪು.ತಿ.ನ., ಗೋಕಾಕ್, ಬೇಂದ್ರೆ ಮೊದಲಾದವರು ಸಹಕರಿಸಿದ್ದಾರೆ. ಅನಂತರ ಯು.ಜಿ.ಸಿ. ಅಧ್ಯಾಪಕರೆಂದು ಮಹಾರಾಜ ಕಾಲೇಜು ಸೇರಿದರು. ಅದೇ ವರ್ಷ ಅಧ್ಯಾಪಕರಾಗಿ ಮಾನಸಗಂಗೋತ್ರಿಗೆ ಬಂದರು (೧೯೬೦-೬೩). ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದ ಆಡಳಿತಾಧಿಕಾರಿಗಳ ಆಹ್ವಾನವನ್ನೊಪ್ಪಿ ಅಲ್ಲಿನ ಕನ್ನಡ ವಿಭಾಗದ ಮುಖ್ಯಸ್ಥ ಹಾಗೂ ಉಪ ಪ್ರಾಧ್ಯಾಪಕ ರಾಗಿ ೧೯೬೩ರ ನವೆಂಬರಿ. ನಿಂದ ೧೯೬೫ರ ನವೆಂಬರ್ ವರೆಗೆ ಕರ್ತವ್ಯ ನಿರ್ವಹಿಸಿದರು.

ಈ ನಡುವೆ ೧೯೬೩ರಲ್ಲಿ ತುಮಕೂರಿನಲ್ಲಿ ನಡೆದ ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷರಾಗಿದ್ದರು. ಇದೇ ವರ್ಷ ದೆಹಲಿಯಲ್ಲಿ ಜರುಗಿದ ರಾಷ್ಟ್ರೀಯ ಕವಿಮೇಳದಲ್ಲಿ ಕರ್ನಾಟಕದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ೧೯೬೫-೬೬ರ ಅವಧಿಯಲ್ಲಿ ಜಿ.ಎಸ್.ಎಸ್. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ

ರೀಡರ್ ಮತ್ತು ವಿಭಾಗದ ಮುಖ್ಯಸ್ಥರಾಗಿ ಕೆಲಸ ನಿರ್ವಹಿಸಿದರು. ನಂತರ ೧೯೬೬ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ರೀಡರ್‌ಸ್ಥಾನಕ್ಕೆ ಆಯ್ಕೆಗೊಂಡು ೧೯೭೦ರವರೆಗೂ ಮುಂದುವರಿದರು. ಅಲ್ಲಿ ಡಾ. ರಂ.ಶ್ರೀ. ಮುಗಳಿ ಅವರು ನಿವೃತ್ತರಾದ ಮೇಲೆ ಜಿ.ಎಸ್.ಎಸ್. ೧೯೭೦ರಿಂದ ಪ್ರಾಧ್ಯಾಪಕ ಮತ್ತು ಮುಖ್ಯಸ್ಥರಾಗಿ ನೇಮಕಗೊಂಡರು. ಮರುವರ್ಷವೇ (೧೯೭೧) ಬೆಂಗಳೂರು ವಿಶ್ವ ವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಕನ್ನಡದ ಶ್ರೇಯಸ್ಸಿಗಾಗಿ ಅವಿರತವಾಗಿ ದುಡಿದರು.

ಜಿ.ಎಸ್.ಎಸ್. ಅವರು ೧೯೭೨ರ ಸೆಪ್ಟೆಂಬರ್‌ನಲ್ಲಿ ಭಾರತ ಹಾಗೂ ಸೋವಿಯೆಟ್ ಸಾಂಸ್ಕೃತಿಕ ವಿನಿಮಯ ಯೋಜನೆಯಲ್ಲಿ ಇಪ್ಪತ್ತೆರಡು ದಿನಗಳ ಕಾಲ ರಷ್ಯಾ ಪ್ರವಾಸ ಕೈಗೊಂಡರು. ಇದರ ಫಲವೇ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ' ಎಂಬ ಕೃತಿ. ಇದಕ್ಕೆ ೧೯೭೩ರಲ್ಲಿ ಸೋವಿಯಟ್ ಲ್ಯಾಂಡ್ ನೆಹರೂ ಪ್ರಶಸ್ತಿ ದೊರೆತಿದೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಎರಡು ದಶಕಗಳ ಕಾಲ ಜಿ.ಎಸ್.ಎಸ್. ಕಾವ್ಯ ಮತ್ತು ಕಾವ್ಯ ಮೀಮಾಂಸೆಗಳನ್ನು ಕುರಿತಂತೆ ಪಾಠಹೇಳಿದ್ದಾರೆ. ಪ್ರಾಚೀನ ಮತ್ತು ಆಧುನಿಕ ಕನ್ನಡ ಕಾವ್ಯ, ಆಂಗ್ಲ ರೊಮ್ಯಾಂಟಿಕ್ ಕಾವ್ಯ, ಐರೋಪ್ಯ ನವ್ಯಕಾವ್ಯ, ಪಾಶ್ಚಾತ್ಯ ಮಹಾಕಾವ್ಯ ಹಾಗೂ ತೌಲನಿಕ ಕಾವ್ಯ ಮೀಮಾಂಸೆಗಳು ಅವರು ಹೇಳಿದ ಪಾಠಗಳ ಮುಖ್ಯಕ್ಷೇತ್ರ ಗಳಾಗಿವೆ. ಅವರ ಪಾಠಗಳು ಪೂರ್ವಸಿದ್ಧತೆ, ವಿವರಗಳ ಮಂಡನೆ ಹಾಗೂ ಚಿಂತನ ಶೀಲತೆಗಳನ್ನು ಒಳಗೊಂಡಿರುವುದರ ಜೊತೆಗೆ ಹೊಸದನ್ನು ಹೊಂದಿಸಿಕೊಳ್ಳುವ, ಹೊಸದಕ್ಕೆ ಪ್ರತಿಕ್ರಿಯಿಸುವ ಆಸಕ್ತಿಯಿಂದ ಕೂಡಿರುತ್ತಿದ್ದವು. ಅವರ ಪಾಠಗಳು ವಿದ್ಯಾರ್ಥಿ ಗಳನ್ನು ಹೆಚ್ಚಿನ ಚಿಂತನೆಗೆ ಒಳಪಡಿಸುತ್ತಿದ್ದವು. ಜಿ.ಎಸ್.ಎಸ್. ಅವರು ಕನ್ನಡ ಸಾಹಿತ್ಯ ಕ್ಷೇತ್ರ ಬೆಳಸಬಲ್ಲ ಸಮರ್ಥ ಶಿಷ್ಯ ಪಡೆಯನ್ನು ತಯಾರು ಮಾಡಿದ್ದಾರೆ. ಅಂತಹವರಲ್ಲಿ ಒಬ್ಬರಾದ ಡಾ. ಕೆ.ವಿ. ನಾರಾಯಣ ಅವರು "ಜಿ.ಎಸ್.ಎಸ್. ಅವರ ಹಲವು ವಿಮರ್ಶಾಲೇಖನಗಳ ಚೌಕಟ್ಟುಗಳು ತರಗತಿಗಳ ಪಾಠಗಳ ಮೂಲಕ ಆಕಾರ ಪಡೆದವು" ಎನ್ನುತ್ತಾರೆ. ಹೀಗೆ ಸೃಜನಶೀಲ ಸಾಹಿತಿ ಮತ್ತು ವಿಮರ್ಶಕರಾಗಿ ಮಹತ್ವದ ಕೆಲಸ ಮಾಡಿರುವುದರ ಜೊತೆಗೆ ಡಾ. ಜಿ.ಎಸ್.ಎಸ್. ಶಿಕ್ಷಣ ಮತ್ತು ಸಾಹಿತ್ಯ ಸಂಯೋಜನೆಗಳ ಕ್ಷೇತ್ರ ದಲ್ಲಿಯೂ ಕೆಲಸವನ್ನು ಮಾಡಿದ್ದಾರೆ. ಅವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ನಿರ್ದೇಶಕ ರಾಗಿದ್ದಾಗ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಈ ಕೆಳಕಂಡ ಸಾಧನೆಗಳನ್ನು ಮಾಡಿದ್ದಾರೆ.

೧) ಎಂ.ಎ. ತರಗತಿಗಳಲ್ಲಿ ತೌಲನಿಕ ಅಧ್ಯಯನ, ಶೈಲಿಶಾಸ್ತ್ರ, ಸಾಮಾಜಿಕ ಭಾಷಾವಿಜ್ಞಾನ, ಸಂಸ್ಕೃತಿಯ ಅಧ್ಯಯನ ಮುಂತಾದ ಹೊಸಹೊಸ ಜ್ಞಾನ ಶಾಖೆ ಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಆ ಪದವಿಯನ್ನು ಹೆಚ್ಚು ಪ್ರೌಢವಾಗಿಸಿದರು.

೨) ಸುಮಾರು ಹದಿನೆಂಟು ವರ್ಷಗಳ ಕಾಲ ಕನ್ನಡ ವಿಭಾಗದಲ್ಲಿ ಪ್ರತಿವರ್ಷವೂ ಬೇರೆ, ಬೇರೆ ವಿಷಯಗಳನ್ನು ಕುರಿತು ವಿಚಾರ ಸಂಕಿರಣಗಳನ್ನು ನಡೆಸಿದರು. ಇವುಗಳಲ್ಲಿ ವಿವಿಧ ಸಾಹಿತ್ಯಕ ಚಳುವಳಿಗಳಿಗೆ ಸೇರಿದ ವಿದ್ವಾಂಸರಿಗೆ ಮಾತನಾಡಲು ಅವಕಾಶ ದೊರೆಯುತ್ತಿತ್ತು. ಪುಸ್ತಕ ರೂಪದಲ್ಲಿ ಹೊರಬಂದಾಗ ಕನ್ನಡ ವಿಮರ್ಶೆಯ ಚರಿತ್ರೆಗೆ ಹೊಸಪುಟಗಳನ್ನು ಸೇರಿಸಿದವು.

೩) 'ಸಮಗ್ರ ಸಾಹಿತ್ಯ ಚರಿತ್ರೆ'ಯ ಆರು ಸಂಪುಟಗಳು, 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಹತ್ತು ಸಂಪುಟಗಳು, ಹಾಗೆಯೇ ಮನೆಗೊಂದು ಮಣಿದೀಪ ಮಾಲೆಯ ಹಲವು ಪ್ರಕಟಣೆಗಳು ಬಹಳ ಮುಖ್ಯವಾದವು, 'ಕಾವ್ಯಾರ್ಥ ಪದಕೋಶ', 'ಪಾಶ್ಚಾತ್ಯ ಸಾಹಿತ್ಯ ಮಾರ್ಗದರ್ಶಿ', ಮುಂತಾದ ಉಪಯುಕ್ತ ಕೃತಿಗಳು ಇವರ ಕಾಲದಲ್ಲಿ ಹೊರಬಂದವು.

೪) ಜಿ.ಎಸ್.ಎಸ್. ಅವರು ಪ್ರಾರಂಭಿಸಿದ 'ಸಾಹಿತ್ಯ ವಾರ್ಷಿಕ' ಎಂಬ ಯೋಜನೆಯು ಅತ್ಯಂತ ಮಹತ್ವದ್ದಾಗಿದೆ. ಇದರಲ್ಲಿ ಪ್ರತಿವರ್ಷದ ಸಾಹಿತ್ಯ ಕೃತಿಗಳ ವಿವರವಾದ ಪಟ್ಟಿಯಷ್ಟೆ ಅಲ್ಲದೇ ಪ್ರತಿಯೊಂದು ಕೃತಿಯ ಸಂಕ್ಷಿಪ್ತ ವಿಮರ್ಶೆ ಇದ್ದು, ಇಂದಿಗೂ ಉಪಯುಕ್ತ ದಾಖಲೆಗಳಾಗಿವೆ.

೫) ಶಿವರುದ್ರಪ್ಪನವರು ಸಾಹಿತ್ಯಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ವಿಚಾರ ಸಂಕಿರಣಗಳು ಹಾಗೂ ಪುಸ್ತಕ ಪ್ರಕಟಣೆಗೆ ಹೆಚ್ಚು ಮಹತ್ವ ಕೊಟ್ಟರು. 'ವಿಮರ್ಶೆಯ ಪಾರಿಭಾಷಿಕಗಳು' ಮಾಲೆಯಲ್ಲಿ ಸುಮಾರು ಹದಿಮೂರು ಕೃತಿಗಳನ್ನು ಹೊರತರಲಾಯಿತು. ಭಾರತೀಯ ಸಾಹಿತ್ಯವನ್ನು ಕುರಿತ ಎರಡು ಹೆಬ್ಬೊತ್ತಿಗೆಗಳು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಗೊಂಡವು. ಇದಲ್ಲದೆ ಅವರ ಅವಧಿಯಲ್ಲಿ ನಡೆದ ಬಹುಪಾಲು ವಿಚಾರ ಸಂಕಿರಣಗಳು ಪುಸ್ತಕಗಳ ರೂಪದಲ್ಲಿ ದಾಖಲಾದವು. ಷೇಕ್ಸ್‌ಪಿಯರ್, ಕಾಳಿದಾಸ ಮುಂತಾದ ಅನ್ಯಭಾಷೆಯ ಸಾಹಿತಿಗಳನ್ನು ಕುರಿತಂತೆಯೂ ಸಹ ಪುಸ್ತಕಗಳನ್ನು ಪ್ರಕಟಿಸಿದ್ದು ಜಿ.ಎಸ್.ಎಸ್. ಅವರ ದೊಡ್ಡ ಸಾಧನೆಯಾಗಿದೆ.

ಜಿ.ಎಸ್.ಎಸ್. ಅವರು ಕಾವ್ಯಗಳಿಗೆ ಹಣೆಚೀಟಿಗಳನ್ನು ಅಂಟಿಸಿ ಬಣಗಳನ್ನು ಏರ್ಪಡಿಸುವ ಸಾಹಿತ್ಯ ರಾಜಕೀಯಕ್ಕೆ ಮೊದಲಿನಿಂದಲೂ ವಿರೋಧಿಯಾಗಿದ್ದಾರೆ. ನವೋದಯದ ಕವಿಗಳು ಪಶ್ಚಿಮದಿಂದ ಪ್ರೇರಣೆ ಹೊಂದಿರಬಹುದು. ಆದರೆ ಅನುಕರಿಸಲಿಲ್ಲ. ಅವರು ಬರೆದದ್ದೆಲ್ಲ ನಮ್ಮ ದೇಶ, ನಮ್ಮ ಪರಂಪರೆಗೆ ಸಂಬಂಧಿಸಿದ್ದೇ ಎನ್ನುತ್ತಾರೆ.

ಕನ್ನಡ ವಿಮರ್ಶೆಯನ್ನು ಕುರಿತು ಜಿ.ಎಸ್.ಎಸ್. ಅವರು ಈ ರೀತಿ ಪ್ರತಿಕ್ರಿಯಿಸುತ್ತಾರೆ. 'ವಿಮರ್ಶೆಯಲ್ಲಿ ವಿಚಾರ ಮಾಡುವವರು ಒಬ್ಬರೊ ಇಬ್ಬರೊ. ಅವರಲ್ಲೂ ಕೂಡ ಒಂದು ಸಮತೂಕ ಕಾಣಿಸುವುದಿಲ್ಲ. ವಿಮರ್ಶೆಯಲ್ಲಿ ಕವಿಗಳ ಕುರ್ಚಿಯನ್ನು ಅದಲು-ಬದಲು ಮಾಡುವ, ಇದ್ದಕ್ಕಿದ್ದಂತೆ ಕೆಲವರಿಗೆ ಪಟ್ಟಕಟ್ಟುವ ಪ್ರವೃತ್ತಿಗಳೇ

ಹೆಚ್ಚಾಗಿವೆ. ವಿಮರ್ಶೆ, ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಅಗತ್ಯವಾದ ಆರೋಗ್ಯಕರವಾದ ಒಂದು ಆವರಣನ್ನು ನಿರ್ಮಿಸುವಂತಿರಬೇಕು. ಅದು ಪಂಥ - ಪಕ್ಷಗಳ ನಡುವೆ ಟಗರು ಕಾಳಗವನ್ನೇರ್ಪಡಿಸ ಬಾರದು. ನಿಜವಾದ ಕವಿಗೆ ಅತಿಪ್ರಶಂಸೆಯಿಂದ ಎಷ್ಟು ಅಪಾಯವೋ ಅವಜ್ಞತೆಯಿಂದಲೂ ಅಷ್ಟೇ ಅನ್ಯಾಯವಾಗುತ್ತದೆ. ವಿಮರ್ಶಕರ ಜವಾಬ್ದಾರಿ ಬಹಳ ದೊಡ್ಡದು.'

ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆದಿದೆ ಎನ್ನುವ ಜಿ.ಎಸ್.ಎಸ್. ಕಾವ್ಯದ ವಿಚಾರದಲ್ಲಿ, ಹಿಂದಿನ ರಭಸ - ಉತ್ಸಾಹಗಳು ತಗ್ಗಿ ಒಂದು ರೀತಿಯ ಸಾವಧಾನಗತಿಗೆ ಬಂದಿದೆ ಎಂದು ಹೇಳುತ್ತಾರೆ. ಆದರೂ ಡಾ. ಕಂಬಾರ, ಸಿದ್ದಲಿಂಗಯ್ಯ, ನಿಸಾರ್ ಅಹಮದ್, ತಿರುಮಲೇಶ್, ಲಕ್ಷ್ಮೀನಾರಾಯಣ ಭಟ್ಟ ಇವರ ಪ್ರಯತ್ನಗಳಲ್ಲಿ ಕನ್ನಡ ಕಾವ್ಯ ಹೊಸ ದಿಕ್ಕುದೆಸೆಗಳನ್ನು ಹುಡುಕುವ ಒಂದು ಪ್ರಯತ್ನ ವಿಶೇಷವಾಗಿ ಕಾಣುತ್ತಿದೆ ಎನ್ನುತ್ತಾರೆ.

'ವೈದಿಕ ಪ್ರಜ್ಞೆ ಭಾರತ ಸಂಸ್ಕೃತಿಯ ಅಡಿಪಾಯ' ಎಂಬ ಮಾತನ್ನು ಒಪ್ಪದ ಜಿ.ಎಸ್.ಎಸ್. ವೈದಿಕವೆನ್ನಲಾಗದ ಹಲವು ಸಾಂಸ್ಕೃತಿಕ ಪರಂಪರೆಗಳು ಈ ರಾಷ್ಟ್ರದಲ್ಲಿವೆ ಎನ್ನುತ್ತಾರೆ. ರಷ್ಯಾ ಪ್ರವಾಸದ ನಂತರ ನಾವೆಷ್ಟು ಹಿಂದುಳಿದ್ದೇವೆ ಎನಿಸುವುದಲ್ಲದೆ ನಮ್ಮ ಭವ್ಯಪರಂಪರೆ, ಆದರ್ಶಗಳು, ಸಂಸ್ಕೃತಿಯ ಹೆಮ್ಮೆ ಇವೆಲ್ಲ ಜಳ್ಳೆಂದು ನನಗನಿಸುತ್ತದೆ ಎಂದು ಹೇಳುತ್ತಾರೆ. ಜಾತಿ ಒಂದು ಪಿಡುಗಾಗಿದ್ದು, ಮಹಾಶಾಪವಾಗಿ ಪರಿಣಮಿಸಿದೆ. ಜಾತ್ಯಾತೀತರಾಗಬೇಕೆಂದು ಎಷ್ಟೇ ಉಪನ್ಯಾಸಕೊಟ್ಟರೂ ನಾವು ಯಾವುದೋ ಒಂದು ಜಾತಿಯೊಳಗಿದ್ದೇವೆ ಅನ್ನುವುದನ್ನು ಮರೆಯಲಾಗುವುದಿಲ್ಲ ಎಂದು ಜಿ.ಎಸ್.ಎಸ್. ಮುಕ್ತವಾಗಿ ತಿಳಿಸುತ್ತಾರೆ.

ತುಂಬು ಜೀವನ ನಡೆಸಿರುವ ಡಾ. ಜಿ.ಎಸ್.ಎಸ್. ಮಕ್ಕಳು ಮೊಮ್ಮಕ್ಕಳನ್ನು ಪಡೆದು ಅಜ್ಜನ ಪೀಠವನ್ನಲಂಕರಿಸಿದ್ದಾರೆ. ಇವರ ಮಕ್ಕಳಲ್ಲೊಬ್ಬರಾದ ಶ್ರೀ ಜಯದೇವ್ ಚಾಮರಾಜನಗರದ ಜೆ.ಎಸ್.ಎಸ್. ವಿದ್ಯಾಸಂಸ್ಥೆಯಲ್ಲಿ ಅಧ್ಯಾಪಕರಾಗಿದ್ದಾರೆ. ಗಿರಿಜನರ ಪ್ರಗತಿಗಾಗಿ ಸ್ವೀಡನ್ನಿನ 'ರೈಟ್ಸ್ ಲೌವ್ಲಿಹುಡ್' ಪ್ರಶಸ್ತಿ ವಿಜೇತರಾದ ಡಾ. ಸುದರ್ಶನ ಅವರೊಡನೆ ಶ್ರಮಿಸುತ್ತಿದ್ದಾರೆ.

ಹೀಗೆ ಡಾ. ಜಿ.ಎಸ್. ಶಿವರುದ್ರಪ್ಪನವರು ತಮ್ಮ ಸಾಹಿತ್ಯ ಸಂಪತ್ತಿನಿಂದಾಗಿ ಸಾಹಿತ್ಯಾಭ್ಯಾಸಿಗಳಿಗೆ ಕವಿ, ಮೀಮಾಂಸಕ ಮತ್ತು ವಿಮರ್ಶಕರಾಗಿ ಕಂಡರೆ ನನ್ನಂಥ ಸಾಮಾನ್ಯನಿಗೆ ಆದರ್ಶವಾದಿಯಾಗಿ, ನಾಡಿನ ಚಿಂತಕರಾಗಿ ಹಾಗೂ ಮಾನವ ಸಮಾಜದ ಪ್ರೇಮಿಯಾಗಿ ಕಾಣಬರುತ್ತಾರೆ.

# ಕೃತಿಪರಿಚಯ

## ಕಾವ್ಯ

ಡಾ. ಜಿ.ಎಸ್.ಎಸ್. ಅವರ ಕಾವ್ಯ ಪ್ರಜ್ಞೆ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಶಿಕ್ಷಣ ಪಡೆಯುತ್ತಿದ್ದಾಗಲೇ ಸ್ಫುಟಗೊಂಡಿತ್ತು. ಮೈಸೂರಿನಲ್ಲಿ ಓದುತ್ತಿದ್ದಾಗ ಅವರು ಬರೆದ ಪದ್ಯವೊಂದಕ್ಕೆ ಬಿ.ಎಂ.ಶ್ರೀಯವರ ಪದಕ ದೊರೆತು, ಅದನ್ನು ಕುವೆಂಪು ಪ್ರಧಾನ ಮಾಡಿದರು. ಸ್ವತಃ ಕುವೆಂಪು ಅವರೆ, ಜಿ.ಎಸ್.ಎಸ್. ಅವರು ಬರೆದಿದ್ದ ಇತರ ಕವನಗಳನ್ನು ತರಿಸಿಕೊಂಡು ಓದಿ, ತಿದ್ದಿ ಅವು, ಪ್ರಬುದ್ಧ ಕರ್ನಾಟಕದಲ್ಲಿ ಅಚ್ಚಾಗುವಂತೆ ವ್ಯವಸ್ಥೆ ಮಾಡಿದರು. ಹೀಗೆ ಜಿ.ಎಸ್.ಎಸ್. ಅವರ ಕಾರ್ಯಸಾಧನೆಗೆ ಗುರುಗಳ ಅಭಿನಂದನೆಗಳೊಡನೆ ಆಶೀರ್ವಾದವೂ ದೊರೆಯಿತು. ಇವರ ಪ್ರಪ್ರಥಮ ಕವನ ಪ್ರಕಟವಾದದ್ದು ಮಾಸ್ತಿಯವರ 'ಜೀವನ' ದಲ್ಲಿ, ಥಾಮಸ್ ಗ್ರೇನ ಎಲಿಜಿಯಿಂದ ಈ ಪದ್ಯ ಪ್ರೇರಿತವಾಗಿತ್ತು. ಬಹುಶಃ ಇದೇ ಅವರ ಸಾಹಿತ್ಯ ಜೀವನದ ಆರಂಭ ವಿರಬಹುದು.

ಹೊಸಗನ್ನಡ ಕಾವ್ಯ ಪರಂಪರೆಯಲ್ಲಿ ಖಚಿತವಾದ ಮೂರು ತಲೆಮಾರುಗಳ ನಂತರ ಆ ಸಂಪ್ರದಾಯದ ಹಾದಿಯಲ್ಲಿ ಅಂದರೆ "ಭಾವಗೀತೆಯ ಪರಂಪರೆಯನ್ನು ರಕ್ಷಿಸಿಕೊಂಡು ಬಂದಿರುವ ನಾಲ್ಕನೆಯ ಹಂತಕ್ಕೆ ಜಿ.ಎಸ್.ಎಸ್. ಸೇರುತ್ತಾರೆ. ಇಂಥ ಹೊಣೆಗಾರಿಕೆ ವಿದ್ಯಾಗುರುಗಳಾದ ಕುವೆಂಪು ಅವರಿಂದ ಬಂದಿರಬೇಕು" ಎಂದು ಕ.ವೆಂ. ರಾಜಗೋಪಾಲ ಅಭಿಪ್ರಾಯ ಪಡುತ್ತಾರೆ.

ಜಿ.ಎಸ್.ಎಸ್. ಅವರು ದಾವಣಗೆರೆಯಲ್ಲಿ ಅಧ್ಯಾಪಕರಾಗಿದ್ದಾಲೇ ತಮ್ಮ ಮೊದಲ ಕವನ ಸಂಕಲನವನ್ನು ಪ್ರಕಟಿಸುವ ಉದ್ದೇಶ ಹೊಂದಿದ್ದರು. ಆದರೆ ಅದು ಈಡೇರಿದ್ದು ಅವರು ಮೈಸೂರಿಗೆ ಬಂದನಂತರ. ಇದಕ್ಕೆ ಗುರುಗಳಾದ ತ.ಸು. ಶಾಮರಾಯರ ಸಹಕಾರವೇ ಕಾರಣ. ಅವರು ಪ್ರಾರಂಭಿಸಿದ್ದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆಯ ವತಿಯಿಂದ ಜಿ.ಎಸ್.ಎಸ್. ಅವರ ಪ್ರಥಮ ಕವನ ಸಂಗ್ರಹ 'ಸಾಮಗಾನ' ಎಂಬ ಹೆಸರಿನಿಂದ ೧೯೫೧ ರಲ್ಲಿ ಪ್ರಕಟಗೊಂಡಿತು. ನಂತರದ ವರ್ಷಗಳಲ್ಲಿ 'ಚೆಲುವು -

ಒಲವು', 'ದೇವಶಿಲ್ಪ', 'ದೀಪದ ಹೆಜ್ಜೆ', 'ಕಾರ್ತಿಕ', 'ಅನಾವರಣ', 'ತೆರದ ದಾರಿ', 'ಗೋಡೆ', 'ಕಾಡಿನ ಕತ್ತಲಲ್ಲಿ' ಮತ್ತು 'ಪ್ರೀತಿ ಇಲ್ಲದ ಮೇಲೆ' ಮುಂತಾದ ಕವನ ಸಂಕಲನಗಳು ಪ್ರಕಟಗೊಂಡವು. ಈ ನಿಟ್ಟಿನಲ್ಲಿ ಬಂಗಾಳೀ ಭಕ್ತಿಗೀತೆಗಳ ಅನುವಾದಿತ ಕೃತಿ 'ತೀರ್ಥ ವಾಣಿ', ಆಯ್ದ ಕವನಗಳನ್ನು ಒಳಗೊಂಡ 'ನೂರು ಕವಿತೆಗಳು' ಹಾಗೂ ಇತ್ತೀಚೆಗೆ ಪ್ರಕಟಗೊಂಡ 'ಚಕ್ರಗತಿ' ಕವನ ಸಂಕಲನವನ್ನು ಹೆಸರಿಸಬಹುದು.

ಪ್ರಸ್ತುತ ಬರಹದ ಉದ್ದೇಶ ಜಿ.ಎಸ್.ಎಸ್. ಅವರ ಕವನ ಸಂಕಲನಗಳನ್ನು ಪರಿಚಯಿಸುವುದಾಗಿದೆ. ಈ ಮೊದಲೇ ತಿಳಿಸಿದಂತೆ ಅವರ ಚೊಚ್ಚಲ ಕವನ ಸಂಗ್ರಹವಾದ 'ಸಾಮಗಾನ'ವು ಪ್ರಕೃತಿಪೂಜೆ, ಹೂತೋಟ, ರಥಯಾತ್ರೆ, ನಕ್ಷತ್ರ ಲೋಕ, ತಾಯಿ-ಮಗ, ನೆಲದ ಕರೆ, ಕಾವ್ಯಮಾರ್ಗ ಮುಂತಾದ ಅರವತ್ತನಾಲ್ಕು ಕವನಗಳನ್ನು ಹೊಂದಿದೆ. 'ಸಾಮಗಾನ' ಕವನ ಸಂಕಲನದಲ್ಲಿ ಕುವೆಂಪು ಅವರ ವ್ಯಕ್ತಿತ್ವ ಮತ್ತು ಕಾವ್ಯ ಕವಿಯ ಮೇಲೆ ಗಾಢವಾದ ಪ್ರಭಾವ ಬೀರಿವೆ. ಹೀಗಾಗಿ ಇಲ್ಲಿನ ಬಹುಪಾಲು ಕವನಗಳು ಪ್ರಕೃತಿ ಕವನಗಳಾಗಿವೆ. ಕುವೆಂಪು ಅವರು ಇದಕ್ಕೆ ಬರೆದ ಮುನ್ನುಡಿಯಲ್ಲಿ "ಶಿವರುದ್ರಪ್ಪನವರ ಈ ಕವನಗಳಲ್ಲಿ (ಅ) ಉರ್ಧ್ವಗಮನಾಭಿಲಾಷೆ (ಆ) ಆದರ್ಶೋನ್ಮುಖವಾದ ಅಭೀಪ್ಸೆ, ಸುಂದರವಾದುದನ್ನು, ಸತ್ಯವಾದುದನ್ನು, ಶಿವವಾದುದನ್ನು, ರಸಚೇತನದಿಂದ ಆರಾಧಿಸಿ ಆಕ್ರಮಿಸಿ ಆಗಬೇಕೆಂಬ ಒಂದು ಹಾರೈಕೆ ಇವುಗಳನ್ನು ನಿಸ್ಸಂದೇಹವಾಗಿ ಕಾಣುತ್ತೇವೆ" ಎಂದು ತಿಳಿಸುತ್ತಾರೆ.

ಈ ಸಂಕಲನದ ಪ್ರಕೃತಿ ಪೂಜೆ ಎಂಬ ಕವನದಲ್ಲಿ

**ಇಲ್ಲಿ ಸುಂದರ ಶಿವನ ದರ್ಶನ**
**ಭವ್ಯವಾಗಿದೆ ಈ ಗುಡಿ**

ಎಂದು ಹೇಳುವ ಕವಿ ಪ್ರಕೃತಿಯನ್ನು ಆರಾಧಕ ಭಾವದಿಂದ ಕಂಡು, ಅದರ ಚೆಲುವಿಗೆ ಮಾರುಹೋಗಿದ್ದಾರೆ. ರಥಯಾತ್ರೆ ಕವನದಲ್ಲಿ ಕವಿ ಸಂಕುಚಿತ ಗಡಿಗಳನ್ನು ದಾಟಿ ವಿಶಾಲವಾದ ಮಾರ್ಗದಲ್ಲಿ ಮುನ್ನಡೆಯುವುದನ್ನು ಕಾಣುತ್ತೇವೆ.

ಎರಡನೆಯ ಕವನ ಸಂಕಲನ 'ಚೆಲುವು - ಒಲವು' ೧೯೫೩ರಲ್ಲಿ ಪ್ರಕಟಗೊಂಡಿತು. ಜಡೆ, ಮಲ್ಲಿಗೆ, ಹೂಬಳ್ಳಿ, ಭಗ್ನಚೆಲುವೆ, ಪ್ರಕೃತಿ ಮುಂತಾದ ನಲವತ್ತನಾಲ್ಕು ಕವನಗಳಿವೆ. ಪು.ತಿ.ನ. ಅವರು ಈ ಸಂಕಲನದಲ್ಲಿ 'ಹರಿವ ಮನವನು ಹಿಡಿದು ಒಂದೆಡೆ ನಿಲ್ಲಿಸಿ ಕೊಳ್ಳುವ ಗೀತೆಗಳು ತುಂಬಿವೆ', ಎಂದು ತಮ್ಮ ಮುನ್ನುಡಿಯಲ್ಲಿ ತಿಳಿಸುತ್ತಾರೆ. ಮುಂದುವರೆದು 'ಸಾಮಗಾನ'ದ ಬೆಡಗು ಬಿನ್ನಾಣಗಳೇ ಈ 'ಚೆಲುವು-ಒಲವು' ಸಂಕಲನದ ಕವನಗಳಲ್ಲಿದೆ ಹಾಗೂ ಓದುಗರ ಊಹೆಗೆ ಏನೊಂದನ್ನು ಬಿಡದೆ ವಿವರವಾಗಿ ವರ್ಣಿಸಲಾಗಿದೆ ಎನ್ನುತ್ತಾರೆ. ವಿಮರ್ಶಕರು ಇಲ್ಲಿನ ಗೀತೆಗಳನ್ನು ಚೆಲುವಿನ (ಪ್ರಕೃತಿ) ಗೀತೆಗಳು ಮತ್ತು ಒಲವಿನ (ಸಂಸಾರಿಕ) ಗೀತೆಗಳು ಎಂದು ವಿಭಾಗಿಸುತ್ತಾರೆ. ಪ್ರಕೃತಿ ಗೀತೆಗಳಲ್ಲಿ ಆದರ್ಶವ್ಯಕ್ತಿಯಾಗಿ ಕಾಣುವ ಕವಿ, ಒಲವಿನ ಗೀತೆಗಳಲ್ಲಿ ಸುಂದರ ಸಂಸಾರಿ

ಯಾಗಿ ವಾಸ್ತವಿಕ ವ್ಯಕ್ತಿಯಾಗಿ ಕಾಣುತ್ತಾರೆ. ಸ್ವತಃ ಜಿ.ಎಸ್.ಎಸ್. ಅವರು 'ಚೆಲುವು-ಒಲವು' ಸಂಗ್ರಹ ಸಹಜವಾಗಿಯೇ ನನ್ನ ಸಾಂಸಾರಿಕ ಬದುಕಿನ ಹಲವು ಮುಖಗಳನ್ನು, ಅದರ ಸುತ್ತಣ ಚೆಲುವನ್ನು ಕುರಿತದ್ದಾಗಿತ್ತು ಎನ್ನುತ್ತಾರೆ.

'ಸಾಮಗಾನ'ದ ಕವಿತೆಗಳ ಭಾಷಾವಿನ್ಯಾಸಕ್ಕಿಂತ ಚೆಲುವು - ಒಲವು ಸಂಕಲನದ ಕವಿತೆಗಳ ಭಾಷೆ ಬೇರೆಯಾದ ಹಾಗೂ ಬೇರೆಯಾಗುತ್ತಿರುವ ಲಕ್ಷಣವನ್ನು ಪಡೆದುಕೊಳ್ಳತೊಡಗಿತ್ತು. ನಿಯತಬಂಧಗಳು ಮುಕ್ತ ಛಂದೋರೂಪಗಳಾಗಿ ಮಾರ್ಪಾಡಾಗತೊಡಗಿದ್ದವು. ಈ ಬದಲಾವಣೆಗೆ ಕಾರಣ ನವ್ಯಕಾವ್ಯದ ಧೋರಣೆಗಳು ಮತ್ತು ಪ್ರಯೋಗಗಳು. ಕಾಲ ಮತ್ತು ಮನುಷ್ಯ ಈ ಸಂಬಂಧ ಕುರಿತ ವಸ್ತುವೊಂದು ಮೊದಲು ಕಾಣಿಸಿಕೊಂಡದ್ದು ಈ ಸಂದರ್ಭದಲ್ಲಿ. ಈ ಸಂಕಲನದ ಭಗ್ನಚೆಲುವೆ ಎಂಬ ಕವಿತೆಯೊಂದರಲ್ಲಿ ಕಾಣಿಸಿಕೊಂಡ, ಈ ಚಿಂತನೆ ಮುಂದೆ ೧೯೫೫ರ ವೇಳೆಗೆ ಪ್ರಕಟಗೊಂಡ 'ದೀಪಹೆಜ್ಜೆ' ಸಂಗ್ರಹದ ಮುಖ್ಯ ತಾತ್ವಿಕ ಚಿಂತನೆಯಾಗಿ ನೆಲೆಗೊಂಡಿದೆ.

೧೯೫೮ರಲ್ಲಿ ಪ್ರಕಟಗೊಂಡ 'ದೇವಶಿಲ್ಪ' ಕವನ ಸಂಕಲನದ ಮೂಲಕ ನವೋದಯ ಕಾವ್ಯದ ಹಾದಿಯಲ್ಲಿ ನಡೆಯುತ್ತಾ ನವ್ಯಕ್ಕೆ ಇಣಕು ಹಾಕುತ್ತಿರುವ ಕವಿಯನ್ನು ಕಾಣುತ್ತೇವೆ. ಈ ಸಂಕಲನದಲ್ಲಿ ಕೃಷ್ಣಶಕ್ತಿ, ವಿರಹಗೀತೆ, ಮುಗ್ಧೆ, ಸಂಜೆಮೌನ, ಹಂಪೆ, ದೇವಶಿಲ್ಪ ಮುಂತಾದ ನಲವತ್ತನಾಲ್ಕು ಕವನಗಳಿವೆ. ಕವಿ ದೈವಿಶಕ್ತಿಗೆ ಮರುಳಾಗಿ ವಿಸ್ಮಯಗೊಂಡಿರು ವುದನ್ನು ಕೃಷ್ಣಶಕ್ತಿ ಕವನದಲ್ಲಿ ಕಾಣಬಹುದು. ಹಾಗೆಯೇ ಹಂಪೆ ಕವನದಲ್ಲಿ ನಾಡಿನ ಗತಕಾಲದ ವೈಭವವನ್ನು ನೆನಸಿಕೊಳ್ಳುವ ಕವಿ ಮನಸ್ಸು ಮತ್ತೆ ಆ ವೈಭವವನ್ನು ನೆಲೆಗೊಳಿಸುವ ಕನಸಿನಲ್ಲಿ ಆವೇಶಗೊಳ್ಳುತ್ತದೆ.

**ಹರಿಯಿತೇನು ಋಣ ನನಗೂ ನಿನಗೂ**
**ಬೆಸುಗೆ ಬಿರಿಯಿತೇ ಒಲವಿಗೆ ಕಡೆಗೂ।**

ಎಂಬ "ವಿರಹಗೀತೆ" ಕವನದಲ್ಲಿ ಗಂಡ ಹೆಂಡಿರ ಜಗಳ ಒಮ್ಮೊಮ್ಮೆ ಯಾವ ವಿಕೋಪಕ್ಕೆ ಹೋಗುತ್ತದೆ ಎಂಬುದರ ಚಿತ್ರಣವಿದೆ.

'ದೀಪದಹೆಜ್ಜೆ' ಕವನ ಸಂಕಲವು ೧೯೫೫ರಲ್ಲಿ ಹೊರಬಂದಿತು. ಮಾಗಿ, ಮಬ್ಬಿನಿಂದ ಮಬ್ಬಿಗೆ, ಸಂಜೆದಾರಿ, ರಾತ್ರೋರಾತ್ರಿ, ನೆರಳಿಲ್ಲದ ದಾರಿ, ಕವಳತಾಯಿ ಕವಳ, ಇವನು, ಬಿಡುಗಡೆ, ಜನರು ಹಾಗೂ ಪತಿತ ಮುಂತಾದ ಮುವ್ವತ್ತೇಳು ಕವನಗಳನ್ನು ಒಳಗೊಂಡಿವೆ. ಈ ಸಂಗ್ರಹದ ಮುಖ್ಯ ತಾತ್ವಿಕ ಚಿಂತನೆಯಾಗಿ ಕಾಲ ಮತ್ತು ಮನುಷ್ಯನ ಸಂಬಂಧ ನೆಲೆಗೊಂಡಿದೆ. ಜಿ.ಎಸ್.ಎಸ್. ಅವರೇ ತಿಳಿಸುವಂತೆ, 'ದೀಪದ ಹೆಜ್ಜೆ' ಕವನ ಸಂಕಲನವು ಬದುಕಿನ ಸಮಸ್ಯೆಯ ಎರಡು ಮುಖಗಳ ವಿವೇಚನೆ. ಒಂದು ಮಾನವ - ಅಂತರಂಗ; ಮತ್ತೊಂದು ಮಾನವ - ಕಾಲ. ಹೀಗೆ ಮನ-ಮನೆ, ಮನ - ಜಗ ಎಂದು ಆ ಮುಖಗಳನ್ನು ಇನ್ನಷ್ಟು ಸ್ಪಷ್ಟಗೊಳಿಸಬಹುದು. ಅದನ್ನೇ ಬೇಕಾದರೆ ಜೀವನ ಹೋರಾಟವೆಂದು ಕರೆಯಬಹುದು. ಆ ಹೋರಾಟದಲ್ಲಿ ಮೂಡಿದ ಅನುಭವಗಳೇ ದೀಪದ ಹೆಜ್ಜೆಗಳು.

ಈ ಸಂಕಲನದ "ರಾತ್ರೋರಾತ್ರಿ" ಎಂಬ ಕವನದ

**ಕತ್ತಲಿನ ತಿಪ್ಪೆಯ ರಾಶಿಯಂಚಿನಲ್ಲಿ**
**ತಿಂದೆಸೆದ ಮಾವಿನವಾಟೆ ಆ ಚಂದ್ರ**

ಎಂಬ ಚಂದ್ರನ ಕಲ್ಪನೆಯು ಜಿ.ಎಸ್.ಎಸ್. ಅವರ ನವ್ಯ ದೃಷ್ಟಿಗೆ ಸ್ಪಷ್ಟ ಉದಾಹರಣೆ. ಹಾಗೆಯೇ 'ನೆರಳಿಲ್ಲದ ದಾರಿ' ಕವನದಲ್ಲಿ ನವೋದಯ ಕಾವ್ಯದ ಮನೋಧರ್ಮವು ಕಂಡುಬರುತ್ತದೆ.

ಆರನೆಯ ಕವನ ಸಂಕಲನವಾದ 'ಕಾರ್ತೀಕ' ೧೯೬೧ರಲ್ಲಿ ಪ್ರಕಟಗೊಂಡಿತು. ಶಾರದೆ, ಮಾಘಜಿನ, ಬೇಸಗೆಯ ಇರುಳು, ಮಲೆನಾಡಿನಲ್ಲಿ ಶರದ್‌ರಾತ್ರಿ, ಮೋಡಿ, ಕಾರ್ತೀಕದ ಇರುಳು, ಕವಿ, ವೇದಾಂತಿ ಮತ್ತು ಶಕ್ತಿಯ ಕೊಡು ಮುಂತಾದ ನಲವತ್ತು ಕವನಗಳನ್ನು ಒಳಗೊಂಡಿದೆ. ಈ ಕವನಗಳು ೧೯೫೬ರಿಂದ ೧೯೬೧ರ ಅವಧಿಯಲ್ಲಿ ರಚಿತಗೊಂಡಿವೆ. ಗಾರುಡಿ, ಅತಿಥಿಗಳು, ಮುಗಿದ ಕತೆ ಮತ್ತು ಪಾರ್ಕಿನಲ್ಲಿ ಒಂದು ಸಂಜೆ, ಕವಿತೆಗಳು ೧೯೫೪ಕ್ಕಿಂತ ಮೊದಲು ರಚಿತಗೊಂಡಂತಹವು. ಒಟ್ಟಿನಲ್ಲಿ ಈ ಸಂಕಲನದ ಎಲ್ಲಾ ಕವಿತೆಗಳ ರಚನೆಯ ಕಾಲ ಹೆಚ್ಚೆಂದರೆ ಆ ಒಂದು ದಶಕ ಮಾತ್ರ. ಈ ಅವಧಿಯನ್ನು ಹೊಸಗನ್ನಡ ಕಾವ್ಯದಲ್ಲಿ ಒಂದು ಸಂಕ್ರಮಣ ಕಾಲವೆಂದೇ ಗುರುತಿಸಿದ್ದಾರೆ. ಆಗ ನವೋದಯ ಕಾವ್ಯ ಮುಕ್ತಾಯದ ಹಂತದಲ್ಲಿಯೂ ನವ್ಯಕಾವ್ಯ ಪ್ರಾರಂಭದ ಅವಸ್ಥೆಯಲ್ಲಿಯೂ ಇದ್ದವು.

ಈ ಸಂಕಲನದ ಕವಿತೆಗಳು ಸಂತೋಷವನ್ನು ಬೀರುವಂಥವಾಗಿವೆ. ಜೀವನದ ವಿವಿಧ ಮುಖಗಳನ್ನು ವ್ಯತ್ಯಾಸಗಳನ್ನು ಗುರುತಿಸುವ ಕಾರ್ಯ ಇಲ್ಲಿ ನಡೆದಿದ್ದರೂ, ಅವುಗಳ ವಿಕೃತ ರೂಪಗಳಿಗೆ ಮಹತ್ವ ಕೊಟ್ಟಿಲ್ಲ. ಪ್ರಕೃತಿಯ ಚೆಲುವನ್ನು ಕಂಡರಿಸುವುದರಲ್ಲಿ ಜಿ.ಎಸ್.ಎಸ್. ಅವರು ಹೆಚ್ಚಿನ ಒಲವು ತೋರಿಸಿದ್ದಾರೆ. ಒಂದೊಂದು ಕವಿತೆಯಲ್ಲಿಯೂ ಪ್ರತಿಮಾ ವಿಧಾನರೂಪಕ ಗುಣ ಮತ್ತು ಸಂಕೇತಗಳ ಸೃಷ್ಟಿ ಗಮನಾರ್ಹವಾಗಿವೆ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಪ್ರತಿಮಾ ವಿಧಾನದ ವೈಶಿಷ್ಟ್ಯಕ್ಕೆ ಸಂಕಲನದ 'ಶಾರದೆ' ಕವಿತೆಯನ್ನು ನೋಡುವುದಾದರೆ ಶರದ್‌ಋತು ಕವಿತೆಯ ವಸ್ತುವಾಗಿದ್ದು, ಒಂದು ಸ್ತ್ರೀರೂಪದಲ್ಲಿ ಮೂರ್ತಗೊಂಡಿದೆ. ಮೂರ್ತಗೊಂಡ ಶರದ್ ಋತು ಒಬ್ಬ ತರುಣಿಯಾಗಿ, ಗಂಡನ ಮನೆಗೆ ಹೋಗಿ ಕೊನೆಗೆ ಒಬ್ಬ ಗಂಭೀರ ಗೃಹಿಣಿಯಾಗಿ ಶೋಭಿಸುತ್ತಾಳೆ. ಋತುಗಳಿಗೂ ತರುಣಿಯ ಜೀವನ ಕ್ರಮಕ್ಕೂ ಇರುವ ಸಂಬಂಧವನ್ನು ಸಾಂಗತ್ಯಗೊಳಿಸಿ ತೋರಿಸುವುದರಲ್ಲಿ ಕವಿತೆಯ ಕಲಾವಂತಿಕೆ ಇದೆ. ನವೋದಯ ನವ್ಯ ಕವಿತೆಗಳ ಸಂಗಮವಾಗಿ ರುವ ಈ ಕೃತಿ ಹೊಸಗನ್ನಡ ಕಾವ್ಯದ ಬೆಳವಣಿಗೆಯಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ.

೧೯೬೧ ರಿಂದ ೧೯೬೩ ರವರೆಗೆ ಬರೆದ ಕವನಗಳ ಸಂಕಲನ 'ಅನಾವರಣ' ಎಂಬ ಹೆಸರಿನಿಂದ ೧೯೬೩ರಲ್ಲಿ ಹೊರಬಂದಿತು. ಈ ಸಂಕಲನವು ಮೊರೆ, ಹಾರೈಕೆ, ಕವಿ-ಕಿವಿ, ಅನಾವರಣವಾಯಿತಂತೆ, ಮತ್ತು ಶನಿದೇವರ ವಿಗ್ರಹ ಮುಂತಾದ ನಲವತ್ತೊಂದು

ಕವನಗಳನ್ನು ಹೊಂದಿದೆ. ಇಲ್ಲಿ ಕವಿ ತಾನು ನಿಂತ 'ನಿಜದ ನೆಲೆ'ಯತ್ತ ದೃಷ್ಟಿ ಹಾಯಿಸಿದ್ದಾರೆ. ಮನುಷ್ಯನ ಅವನತಿಗೆ ಕೊರಗಿದ್ದಾರೆ. ಪರಂಪರೆಯ ಮೌಲ್ಯಗಳನ್ನು ಮರೆತು ಸ್ವಾರ್ಥಕ್ಕೆ ಒಳಗಾಗಿದ್ದು, ಭ್ರಷ್ಟ ವ್ಯವಸ್ಥೆಗಳ ಚಿತ್ರಣವನ್ನು ಈ ಸಂಕಲನದ ಕವನಗಳಲ್ಲಿ ವ್ಯಂಗ್ಯವಾಗಿ ಮೂಡಿಸಲಾಗಿದೆ.

ನಂತರ ಬಂದ 'ತೆರೆದ ದಾರಿ' ಸಂಕಲನದ ಕವನಗಳು ೧೯೬೩ರಿಂದ ೧೯೬೬ರವರೆಗೆ ರಚಿತಗೊಂಡಿದ್ದು ೧೯೬೬ರಲ್ಲಿ ಪ್ರಕಟಗೊಂಡಿತು. ಇದು ಜಿ.ಎಸ್.ಎಸ್. ಅವರ ಎಂಟನೆಯ ಕವನ ಸಂಗ್ರಹ. ತಮ್ಮ ಮುನ್ನುಡಿಯಲ್ಲಿ "ಈ ದಾರಿ ನನಗೆ ತೆರೆದದ್ದು ಅಥವಾ ನಾನು ಬರೆಯುತ್ತಾ ಹೋದ ಹಾಗೆ ತೆರೆಯುತ್ತಾ ಹೋದದ್ದು, ಅನುಭವದ ಅನೇಕ ಮುಖಗಳು ತೆರೆದದ್ದು, ಅದರ ಪರಿಣಾಮವಾದ ಅಭಿವ್ಯಕ್ತಿಗಳು ತೆರೆದದ್ದು, ಈ ದಾರಿ. ಆದ್ದರಿಂದ ಬೇರೇನೂ ಯೋಚಿಸದೆ 'ತೆರೆದದಾರಿ' ಎಂದು ಹೆಸರಿಟ್ಟು ಕೈತೊಳೆದು ಕೊಂಡದ್ದಾಯಿತು" ಎಂದು ತಿಳಿಸುತ್ತಾರೆ. ಈ ಸಂಗ್ರಹದಲ್ಲಿ ಸ್ತ್ರೀ, ಸಂಕ್ರಮಣ, ಆದಿಕವಿ, ಎರಡು ಕತ್ತಲ ನಡುವೆ ಮತ್ತು ಇನ್ನಿಲ್ಲ ನಮಗೆ ನೆಹರೂ ಮುಂತಾದ ಕವನಗಳಿವೆ. "ಆದಿ ಕವಿ" ಕವನದಲ್ಲಿ

ಮೊಟ್ಟ ಮೊದಲನೆಯ ಬಾರಿಗೆ ಹೆಳವ ಭಾಷೆಗೆ ಗರುಡಗರಿ

**ಮೂಡಿಸಿದ ಮೋಡಿಕಾರ**
**ತನ್ನ ಪಾತ್ರವನು ತಾನೇ ನಿರ್ಮಿಸುವ ಹರಿವ**
**ಮುಂಗಾರಿನ ಮಹಾಪೂರ**

ಎನ್ನುವಲ್ಲಿ ಸಾಹಿತ್ಯ ಮತ್ತು ಭಾಷೆಯ ಕೃಷಿಯಲ್ಲಿ ಆದಿಕವಿಯ ಪಾತ್ರವನ್ನು ಕುರಿತು ಪ್ರಶಂಸಿಸಲಾಗಿದೆ.

೧೯೬೬ರಿಂದ ೧೯೭೨ರ ಅವಧಿಯಲ್ಲಿ ಬರೆದ ಕವನಗಳನ್ನು 'ಗೋಡೆ' ಎಂಬ ಶೀರ್ಷಿಕೆಯ ಕವನ ಸಂಕಲನದಲ್ಲಿ ಅಳವಡಿಸಲಾಯಿತು. ೧೯೭೨ರಲ್ಲಿ ಪ್ರಕಟಗೊಂಡ ಇದರಲ್ಲಿ ಗೋಡೆ, ಪ್ರಜೆ, ಬೆತ್ತಲೆ ಮತ್ತು ಗಾಂಧಿ ಮುಂತಾದ ಐವತ್ತಮೂರು ಕವನ ಗಳಿವೆ. ವ್ಯಕ್ತಿ ವ್ಯಕ್ತಿಯ ನಡುವೆ ಅಸೂಯೆ, ಅಹಂಕಾರ, ಪ್ರತಿಷ್ಠೆಯ ತಪ್ಪು ತಿಳುವಳಿಕೆಗಳ ಗೋಡೆ ಗಳು .... ಇದರಿಂದಾಗಿ ಪರಸ್ಪರ ಅರಿವು, ಆತ್ಮೀಯತೆ, ವಿಶಾಲತೆಗೆ ಆತಂಕ, ಸಂಪರ್ಕರಹಿತವಾದ ಆವರಣಗಳ ನಡುವೆ ಸಿಕ್ಕು ನರಳುವುದೇ ನಮ್ಮ ಪಾಡು, ಇದು ಶತಮಾನಗಳ ಪಾಡು ಎಂದು ಜಿ.ಎಸ್.ಎಸ್. ತಮ್ಮ ಮುನ್ನುಡಿಯಲ್ಲಿ ತಿಳಿಸುತ್ತಾರೆ.

"ಗೋಡೆ" ಕವನದ ಮೊದಲ ಭಾಗ ಇದ್ದಕ್ಕಿದ್ದಂತೆ ವ್ಯಕ್ತಿ ವ್ಯಕ್ತಿಗಳ ನಡುವೆ ಗೋಡೆಗಳು ಏಳುವ ಕ್ರಿಯೆಯನ್ನು ಕುರಿತು ಹೇಳುತ್ತದೆ.

**ಒಂದೊಂದು ಸಲ ನನಗೂ ನಿನಗೂ ನಡುವೆ**
**ಇದ್ದಕ್ಕಿದ್ದಂತೆ ಗೋಡೆ ಏಳುತ್ತದೆ**
**ಎಲ್ಲಿಂದಲೋ ಏನೊ ಇಟ್ಟಿಗೆಯ ಮೇಲೆ ಇಟ್ಟಿಗೆ ಬಂದು**
**ಕೂತು, ಕೂತಲ್ಲಿಯೇ ನಮ್ಮನ್ನು ಹೂತು**
**ಸುತ್ತಲೂ ಗೋಡೆ ಕಟ್ಟುತ್ತದೆ**

ಜೀವಂತವಾದ ಅನುಭವವೊಂದನ್ನು ಶಕ್ತವಾದ ಪ್ರತಿಮೆಯೊಂದರ ಮೂಲಕ ಬಿಚ್ಚುವಲ್ಲಿ ಜಿ.ಎಸ್.ಎಸ್. ತಮ್ಮ "ಗೋಡೆ" ಕವನದಲ್ಲಿ ಯಶಸ್ವಿಯಾಗಿದ್ದಾರೆಂದು ವಿಮರ್ಶಕರು ತಿಳಿಸುತ್ತಾರೆ.

'ಕಾಡಿನ ಕತ್ತಲಲ್ಲಿ' ಎಂಬ ಕವನ ಸಂಕಲನವು ಜಿ.ಎಸ್.ಎಸ್. ಅವರ ಮತ್ತೊಂದು ಕೊಡುಗೆಯಾಗಿದೆ. ಈ ಕವನಗಳನ್ನು ೧೯೭೨ ರಿಂದ ೧೯೮೧ರ ಅವಧಿಯಲ್ಲಿ ರಚಿಸಲಾಗಿದೆ. ಈ ದೇಶದಲ್ಲಿ, ಉತ್ತರಾಧಿಕಾರಿ, ಸಾಲುಮರಗಳ ಕೆಳಗೆ, ನಾನೇಕೆ ಬರೆಯುತ್ತೇನೆ ಮತ್ತು ಕಾಡಿನ ಕತ್ತಲಲ್ಲಿ ಮುಂತಾದ ಮೂವತ್ತೈದು ಕವನಗಳನ್ನು ಒಂದೆಡೆ ತರಲಾಗಿದೆ. "ಈ ದೇಶದಲ್ಲಿ" ಎಂಬ ಕವನ ವ್ಯಕ್ತಿಯೊಬ್ಬನ ಎರಡು ಮುಖಗಳನ್ನು ಪರಿಚಯಿಸುತ್ತದೆ. ಸ್ವಾರ್ಥಪರವಾದ ಬಯಕೆಯನ್ನು ಕುರಿತು ವ್ಯಂಗ್ಯ ಮಾಡಲಾಗಿದೆ. "ಕಾಡಿನ ಕತ್ತಲಲ್ಲಿ" ಎಂಬ ಕವನದಲ್ಲಿ ಬ್ರಾಹ್ಮಣ ಮತ್ತು ನಾಲ್ಕು ಜನ ಖದೀಮರ ಜನಪ್ರಿಯ ಕಥೆಗೆ ರೋಚಕವಾದ ರೂಪವನ್ನು ಕೊಡಲಾಗಿದೆ. ಜಿ. ಎಸ್. ಎಸ್. ಅವರು ೧೯೮೨ರಿಂದ ೧೯೮೭ರ ಅವಧಿಯಲ್ಲಿ ರಚಿಸಿದ ಕವನಗಳನ್ನು 'ಪ್ರೀತಿ ಇಲ್ಲದ ಮೇಲೆ' ಎಂಬ ಕೃತಿಯಲ್ಲಿ ಹೊರತಂದರು. ಇದರಲ್ಲಿ ಪ್ರೀತಿ ಇಲ್ಲದ ಮೇಲೆ, ಲಿಖಿತ, ಅವಸ್ಥೆ, ಹೊಸಮನೆಯಲ್ಲಿ, ಹಿಮಾಲಯದ ಸ್ಮೃತಿ ಸಂಪುಟ ಮತ್ತು ಒಂದು ಕನಸು ಮುಂತಾದ ಮೂವತ್ತೊಂದು ಕವನಗಳ ಸಂಕಲನವಾಗಿದೆ. "ಪ್ರೀತಿ ಇಲ್ಲದ ಮೇಲೆ" ಎಂಬ ಕವನದಲ್ಲಿ ಜಗತ್ತಿನೊಂದಿಗೆ ಅನುರಕ್ತ ಅಥವಾ ಪ್ರೀತಿ ಸಂಬಂಧವನ್ನು ಪಡೆದು ಕೊಳ್ಳಲಾರದೆ ನಾವು ಯಾವುದಕ್ಕೂ ಸ್ಪಂದಿಸಲಾರೆವು ಎಂಬುದೇ ಕವಿಯ ಧೃಡವಾದ ನಿಲುವು ಆಗಿದೆ.

**ಪ್ರೀತಿ ಇಲ್ಲದ ಮೇಲೆ ಹೂವು ಅರಳೀತು ಹೇಗೆ?**
**ಮೋಡ ಕಟ್ಟೀತು ಹೇಗೆ?**
**ಹನಿಯೊಡೆದು ಕೆಳಗಿಳಿದು**
**ನೆಲಕ್ಕೆ ಹಸಿರು ಮೂಡೀತು ಹೇಗೆ?**

ಎಂದು ಕವಿ ಪ್ರಶ್ನಿಸುತ್ತಾನೆ.

ಜಿ.ಎಸ್.ಎಸ್. ಅವರಿಂದ ಕನ್ನಡಕ್ಕೆ ಅನುವಾದಗೊಂಡ ಬಂಗಾಳಿ ಭಕ್ತಿಗೀತೆಗಳ 'ತೀರ್ಥವಾಣಿ' ಎಂಬ ಸಂಕಲನವು ೧೯೬೦ರಲ್ಲಿ ಮೈಸೂರಿನ ಶ್ರೀರಾಮಕೃಷ್ಣಾಶ್ರಮದ ಮೂಲಕ ಹೊರಬಂದಿತು. ಇದರಲ್ಲಿ 'ಮಾ' ಅವರ ಶ್ರೀರಾಮಕೃಷ್ಣ ವಚನ ವೇದದಲ್ಲಿ ಬರುವ ೫೦ ಬಂಗಾಳಿ ಭಕ್ತಿಗೀತೆಗಳನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. 'ತೀರ್ಥ ವಾಣಿ'ಯ ಐವತ್ತು ಗೀತೆಗಳಲ್ಲಿ ಹದಿನೈದು ಗೀತೆಗಳು ಕಾಳಿಯನ್ನು - ಶಕ್ತಿಯನ್ನು - ಕಾರುಣ್ಯವನ್ನು ಕುರಿತಿವೆ. ಶ್ರೀರಾಮಕೃಷ್ಣ ಪರಮಹಂಸರು ಕಾಳಿಭಕ್ತರಾಗಿರುವುದರಿಂದ ಕಾಳಿಕಾಸ್ತವನಗಳು ಇರುವುದು ಸ್ವಾಭಾವಿಕ. ಈ ಎಲ್ಲಾ ಗೀತೆಗಳನ್ನು ಬರೆದವರು ರಾಮಪ್ರಸಾದ, ದಾಶರಥಿ, ಉದ್ಧವದಾಸ, ನಾನಕ, ಕಬೀರ್ ಮೊದಲಾದವರಾದರೂ

ಅವರೆಲ್ಲರ ಹಾಡುಗಳು ಶ್ರೀರಾಮಕೃಷ್ಣರ ಪವಿತ್ರ ಅನುಭಾವ ಪೂರ್ಣ ಕಂಠದಿಂದ ಹರಿದು ಬಂದು ತೀರ್ಥ ವಾಣಿಗಳಾಗಿವೆ.

೧೯೯೦ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರು ಹೊರತಂದ ಜಿ.ಎಸ್.ಎಸ್. ಅವರ 'ನೂರು ಕವಿತೆಗಳು' ಎಂಬ ಕವನ ಸಂಕಲನ ಪ್ರಮುಖವಾಗಿದ್ದು, ಇದರಲ್ಲಿ ಅವರ ಪ್ರಕಟಿತ ಕೃತಿಗಳಿಂದ ಆಯ್ದ ಒಂದು ನೂರು ಕವಿತೆಗಳನ್ನು ಅಳವಡಿಸಲಾಗಿದೆ. ಇವುಗಳನ್ನು ಹಲವು ಉಪವಿಭಾಗಗಳ ಒಳಗೆ ಅಳವಡಿಸಲಾಗಿದೆ. ಒಂದೊಂದು ಉಪವಿಭಾಗದ ಕವಿತೆಗಳು ಸ್ಥೂಲವಾಗಿ ಒಂದು ನಿರ್ದಿಷ್ಟ ವಸ್ತುವಿಗೆ ಸಂಬಂಧಿಸಿದಂತಿವೆ ಎನ್ನುವುದಕ್ಕಿಂತ, ಅವು ಸಮಾನ ಆಶಯಗಳನ್ನು ಪ್ರತಿನಿಧಿಸುತ್ತವೆ ಎಂದು ಹೇಳಬಹುದು.

ಜಿ.ಎಸ್.ಎಸ್. ಅವರ ಇನ್ನೊಂದು ಕವನ ಸಂಗ್ರಹ 'ಚಕ್ರಗತಿ'ಯು ೧೯೯೨ರಲ್ಲಿ ಪ್ರಕಟಗೊಂಡಿತು. ಇದರಲ್ಲಿ ಸಂಭವ, ಪ್ರತಿಮೆಗಳು, ಚಕ್ರಗತಿ, ಬಿ.ಎಂ.ಶ್ರೀ, ನನ್ನ ದಾವಣಗೆರೆಯ ನೆನಪುಗಳು, ಶ್ರೀ ಶಾರದಾದೇವಿ ಮತ್ತು ಅಸ್ತಮಾನ ಮುಂತಾದ ಮೂವ್ವತ್ತೇಳು ಕವನಗಳು ಹಾಗೂ ಇದರ ಜೊತೆಗೆ ಹತ್ತು ಅನುವಾದ ಕವನಗಳಿದ್ದು ಒಟ್ಟು ನಲವತ್ತೇಳು ಕವನಗಳಿವೆ. ಜಿ.ಎಸ್.ಎಸ್. ಅವರ ಪ್ರಕಟಿತ ಹಲವು ಕವನ ಸಂಕಲನಗಳನ್ನು ಒಳಗೊಂಡ 'ಸಮಗ್ರ ಕಾವ್ಯ' ಎಂಬ ಕೃತಿಯು ೧೯೮೭ರಲ್ಲಿ ಹೊರ ಬಂದಿದೆ. ಇದು ಅವರ ಕಾವ್ಯಾಧ್ಯಯನ ಮಾಡಲು ಬಹಳ ಸಹಕಾರಿಯಾಗಿದೆ. ಇದಕ್ಕೆ ಡಾ. ಕೆ.ವಿ. ನಾರಾಯಣ ಅವರು ಬರೆದ ತಮ್ಮ ನಂಬುಗೆಯ ಹಾದಿಯಲ್ಲಿ "ಜಿ.ಎಸ್.ಎಸ್. ಕವನಗಳಲ್ಲಿ ಎದ್ದುಕಾಣುವುದು ಪ್ರಸಾದ ಗುಣ. 'ಸಾಮಗಾನ' ಕವಿತೆಗಳಿಂದ 'ದೀಪದ ಹೆಜ್ಜೆ' ಕವಿತೆಗಳವರೆಗೆ ಬರುವ ಹೊತ್ತಿಗೆ ಕವಿ ಎರಡು ಜಗತ್ತುಗಳಿಗೆ ಸ್ಪಂದಿಸುವ ಹೊಣೆ ಹೊರಲು ಸಿದ್ದರಾಗುವುದು ಕಂಡು ಬರುತ್ತದೆ. ಒಂದು ಜೀವ ಸಮೃದ್ಧ ಪ್ರಕೃತಿ. ಇನ್ನೊಂದು ಮಾನವ ಕೇಂದ್ರಿತ ಸಮಾಜ. ಪ್ರಕೃತಿ ಕೇಂದ್ರಿತ ಕವಿತೆಗಳಲ್ಲಿ ವಿಸ್ಮಯ, ಉತ್ಸುಕತೆಗಳು ಪ್ರಧಾನ ಭಾವಗಳಾದರೆ, ಮಾನವಕೇಂದ್ರಿತ ಸಮಾಜದಲ್ಲಿ ಸಮರಸವಿಲ್ಲದ ಜೀವನವನ್ನು, ಖಿನ್ನತೆ, ಸಾತ್ವಿಕ ಕ್ರೋಧ, ಅಸಹಾಯಕತೆ ಪ್ರಧಾನ ಭಾವಗಳಾಗಿವೆ" ಎಂದು ಬರೆಯುತ್ತಾರೆ. ಹೀಗೆ ಜಿ.ಎಸ್.ಎಸ್. ಅವರ ಕಾವ್ಯದ ನೆಲೆ ಹಾಗೂ ಒಳನೋಟಗಳನ್ನು ಡಾ. ಕೆ.ವಿ. ನಾರಾಯಣ ಅವರು ಅತ್ಯಂತ ಸಮರ್ಥವಾಗಿ ಗುರುತಿಸಿದ್ದಾರೆ.

ಜಿ.ಎಸ್.ಎಸ್. ಅವರು ನನ್ನ ಕಾವ್ಯದ ಕೇಂದ್ರ ಕಾಳಜಿ ಮನುಷ್ಯ, ದೇವರಲ್ಲ ಎನ್ನುತ್ತಾರೆ. ಸಾಮಾಜಿಕ ಬದುಕು ಎಷ್ಟು ಮುಖ್ಯವೋ ಅದನ್ನು ಸುತ್ತಿ ಮುತ್ತಿ ಕೊಂಡಿರುವ ನಿಸರ್ಗದ ಬದುಕು ಅಷ್ಟೇ ಮುಖ್ಯವೆಂದು ತಿಳಿಯುತ್ತಾರೆ. ಮತ್ತೊಂದು ಕಡೆ ಜಿ.ಎಸ್.ಎಸ್. ಅವರು, ಕಾಲ ಮತ್ತು ಮಾನವ; ಈ ಎರಡರ ಸಂಬಂಧ ಹಾಗೂ ಸಂಘರ್ಷ, ನಾಗರಿಕ ಬದುಕಿನಲ್ಲಿ ಮನುಷ್ಯ ದಿನದಿಂದ ದಿನಕ್ಕೆ ತನ್ನ ವ್ಯಕ್ತಿತ್ವವನ್ನು

ಕಳೆದುಕೊಳ್ಳುತ್ತಿರುವ ದುರಂತ ಹಾಗೂ ವ್ಯಕ್ತಿಗಳ ನಡುವಣ ಸಂಪರ್ಕರಾಹಿತ್ಯದಿಂದ ಉಂಟಾಗಿರುವ ಏಕಾಕಿತನದ ವಿಷಾದ ಈ ಮೂರು ನನ್ನ ಕಾವ್ಯದ ವಸ್ತು ಎನ್ನುತ್ತಾರೆ. ಜಿ.ಎಸ್.ಎಸ್. ಅವರ 'ಗೋಡೆ' ಸಂಕಲನದ "ನನ್ನ ಹಣತೆ" ಎಂಬ ಕವಿತೆಯು ಅವರ ಕಾವ್ಯ ಹಾಗೂ ಕಾವ್ಯೋದ್ದೇಶವನ್ನು ಕುರಿತು ವಿವರವಾಗಿ ಹೇಳುತ್ತದೆ.

**ಕಾವ್ಯಮೀಮಾಂಸೆ**

ಕಾವ್ಯದ ಜತೆಗೆ ಸಾಹಿತ್ಯ ವಿಮರ್ಶೆ ಮತ್ತು ಕಾವ್ಯಮೀಮಾಂಸೆ ನನ್ನ ಆಸಕ್ತಿಯ ವಿಷಯಗಳು ಎಂದು ಜಿ.ಎಸ್.ಎಸ್. ಒಂದು ಕಡೆ ಬರೆಯುತ್ತಾರೆ. ಕಾವ್ಯಮೀಮಾಂಸೆ ಅವರಿಗೆ ಸ್ವಕ್ಷೇತ್ರ. ಸ್ವಯಂ ಪ್ರತಿಭಾವಂತ ಕವಿಯಾಗಿದ್ದು, ಪಾಶ್ಚಾತ್ಯ, ಪೌರ್ವಾತ್ಯ ಕಾವ್ಯ ಮೀಮಾಂಸೆ ತತ್ವಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದಾರೆ. ಇದರಿಂದಾಗಿ ಅವರು ಸ್ವಂತ ಅಭಿಪ್ರಾಯಗಳನ್ನು ರೂಪಿಸಿಕೊಂಡು ಆ ಕ್ಷೇತ್ರದಲ್ಲಿ ನಿರಾಯಸವಾಗಿ ವಿಹರಿಸಿದರು. ಕಾವ್ಯ, ರಸ, ಧ್ವನಿ, ಅಲಂಕಾರ, ಮಾರ್ಗ, ರೀತಿ, ಶೈಲಿ ಇವುಗಳನ್ನು ಹೇಗೆ ಅರ್ಥೈಸಬೇಕೆಂದು ಸ್ವತಂತ್ರವಾಗಿ ವ್ಯಾಖ್ಯಾನಿಸುತ್ತಿದ್ದರು. ಈ ಎಲ್ಲಾ ಗುಣಗಳನ್ನು ಕುವೆಂಪು ಅವರಿಂದ ಬಳುವಳಿಯಾಗಿ ಸ್ವೀಕರಿಸಿದರು ಎನ್ನುವ ಅವರ ಮಿತ್ರ ಸುಬ್ರಹ್ಮಣ್ಯ ಅವರ ಮಾತುಗಳು ಅರ್ಥಪೂರ್ಣ.

ಜಿ.ಎಸ್.ಎಸ್. ಅವರು ತಮ್ಮ ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ 'ಸೌಂದರ್ಯ ಸಮೀಕ್ಷೆ'ಯು ಕಾವ್ಯಮೀಮಾಂಸೆಗೆ ಬಹುದೊಡ್ಡ ಕೊಡುಗೆಯಾಗಿದೆ. ಇದರ ರಚನೆಗೆ ಕುವೆಂಪು ಅವರು ಮಾರ್ಗದರ್ಶಕರಾಗಿದ್ದರು. ಈ ಪ್ರೌಢಪ್ರಬಂಧವು ತನ್ನ ಮಹತ್ವ ಹಾಗೂ ಗುರುಗಳಾದ ತ.ಸು. ಶಾಮರಾಯರ ಸಹಕಾರದಿಂದಾಗಿ ೧೯೬೫ರಲ್ಲಿ ಗ್ರಂಥವಾಗಿ ಪ್ರಕಟಗೊಂಡಿತು. ೧೯೮೭ರ ವೇಳೆಗೆ ನಾಲ್ಕನೇ ಮುದ್ರಣ ಕಂಡು ತನ್ನ ಮಹತ್ವವನ್ನು ಸಾಬೀತು ಮಾಡಿದೆ. ಈ ಕೃತಿಯ ಮುನ್ನುಡಿಯಲ್ಲಿ ಕೃತಿಕಾರರು "ಇಲ್ಲಿ ಪೂರ್ವ-ಪಶ್ಚಿಮ, ಪ್ರಾಚೀನ - ನವೀನ ಆಲೋಚನಾ ಪರಂಪರೆಯನ್ನು ಕಾಣಬಹುದಾಗಿದೆ.............. ಸೌಂದರ್ಯವನ್ನು ಕುರಿತ ವಿಚಾರ ಅತ್ಯಂತ ಸಮ್ಮೋಹಕವಾದುದು ಎಂದು ಎಲ್ಲರಿಗೂ ಅನಿಸಿದರೂ ಅದನ್ನು ಬುದ್ಧಿಪೂರ್ವಕವಾಗಿ ಪರಿಶೀಲಿಸಿ, ವಿಶ್ಲೇಷಿಸಿ, ವಿವೇಚಿಸುವುದು ಅತ್ಯಂತ ತೊಡಕಾದ ಸಾಹಸ ಎನ್ನುತ್ತಾರೆ. ಮುಂದುವರಿದು, ಈ ಬರವಣಿಗೆ ಕಾವ್ಯಗಳ ಗುಣ-ದೋಷ ಮೌಲ್ಯ ನಿರ್ಣಯ ವಿಚಾರವನ್ನು ಕುರಿತ ವಿಮರ್ಶೆ ಅಲ್ಲ. ಅದು ಪ್ರಕೃತ ಸಂಬಂಧದ ಉದ್ದೇಶವೂ ಅಲ್ಲ. ವಿಮರ್ಶೆಗೆ ಮೂಲವಾದ ಕಾವ್ಯದ, ಕಾವ್ಯ ಸೌಂದರ್ಯದ ಅಥವಾ ಕಾವ್ಯಾನುಭವದ ವಿವಿಧ ಅಭಿವ್ಯಕ್ತಿಯ ಮುಖಗಳನ್ನು ಕುರಿತ ಪರಿಶೀಲನೆ ಇದು" ಎಂದು ಬರೆಯುತ್ತಾರೆ. ಕುವೆಂಪು ಮತ್ತು ಬೇಂದ್ರೆಯವರು ಈ ಕೃತಿ ಕುರಿತಂತೆ ಬಹುವಾಗಿ ಪ್ರಶಂಸೆ ಮಾಡಿದ್ದಾರೆ.

ತೌಲನಿಕ ಕಾವ್ಯ ಮೀಮಾಂಸೆಯ ಕೆಲವು ವಿಚಾರಗಳನ್ನು ಕುರಿತ ಲೇಖನಗಳ ಸಂಗ್ರಹವೇ 'ಕಾವ್ಯಾರ್ಥ ಚಿಂತನ'. ಇದು ಜಿ.ಎಸ್.ಎಸ್. ಅವರ ಮಹತ್ವದ ಕೃತಿಗಳಲ್ಲಿ ಒಂದಾಗಿದೆ. ೧೯೮೩ರಲ್ಲಿ ಈ ಕೃತಿ ಪ್ರಕಟಗೊಂಡು, ೧೯೮೪ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆಯಿತು. ಹದಿನೈದು ವರ್ಷಗಳಿಗೂ ಮೀರಿದ ಕಾಲಮಾನದಲ್ಲಿ ಬರೆದ ಹದಿಮೂರು ಲೇಖನಗಳನ್ನು ಒಂದು ರೂಪಕ್ಕೆ ಅಳವಡಿಸಿ ಈ ಕೃತಿಯನ್ನು ಪ್ರಕಟಿಸಲಾಗಿದೆ. ಈ ಲೇಖನಗಳು ಈ ಹಿಂದೆ ಪ್ರಬುದ್ಧ ಕರ್ಣಾಟಕ (೪೫-೩-೧೯೬೩) ಮತ್ತು ಸಾಧನೆಗಳಲ್ಲಿ ಅಚ್ಚಾಗಿದ್ದವು.

ಕೆಲವು ಕಾವ್ಯತತ್ವ ಹಾಗೂ ಪರಿಕಲ್ಪನೆ ಮತ್ತಿತರ ಸಂಗತಿಗಳನ್ನು ತೌಲನಿಕವಾಗಿ ವಿವೇಚಿಸುವ ಪೂರ್ವ ಮತ್ತು ಪಶ್ಚಿಮದ ಚಿಂತನೆಗಳಲ್ಲಿರುವ ಸಾಮ್ಯ ಹಾಗೂ ವೈಶಿಷ್ಟ್ಯಗಳನ್ನು ಗುರುತಿಸುತ್ತ, ಈ ತೌಲನಿಕ ವಿಧಾನದಿಂದ ಹೊರಡುವ ಕೆಲವು ಹೊಸ ಅಥವಾ ಬೇರೆಯೆ ಆದ ವಿಚಾರಗಳನ್ನು ಪ್ರಸ್ತಾಪಿಸುವ ಕಡೆಗೆ ಗಮನವನ್ನು ಕೇಂದ್ರಿಕರಿಸಿದ್ದೇನೆಂದು ಕೃತಿಕಾರರು ತಿಳಿಸುತ್ತಾರೆ. ತೌಲನಿಕ ಕಾವ್ಯ ಮೀಮಾಂಸೆಯ ಚಿಂತನ ಕ್ರಮದಲ್ಲಿ ಜಿ.ಎಸ್.ಎಸ್. ಉದ್ದಕ್ಕೂ ಸೃಜನ ಸಾಹಿತ್ಯವನ್ನು ಹಿನ್ನೆಲೆಗೆ ಇರಿಸಿಕೊಂಡೇ ಚರ್ಚೆಯನ್ನು ಮುಂದುವರಿಸಿದ್ದಾರೆ.

ಜಿ.ಎಸ್.ಎಸ್. ಅವರ ಮತ್ತೊಂದು ಕೃತಿ 'ಮಹಾಕಾವ್ಯ ಸಮೀಕ್ಷೆ'. ಈ ಗ್ರಂಥದಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಮಹಾಕಾವ್ಯ ಸಂಬಂಧ ತತ್ವಗಳನ್ನು ತೌಲನಿಕವಾಗಿ ವಿವೇಚಿಸ ಲಾಗಿದೆ. ೧೯೮೭ನೇ ಫೆಬ್ರುವರಿ ೧೯, ೨೦ ಮತ್ತು ೨೫ರಂದು ಮೈ. ವಿ.ವಿ. ಪ್ರಸಾರಾಂಗದ ನಿರ್ದೇಶಕರ ಆಹ್ವಾನದ ಮೇರೆಗೆ ಜಿ.ಎಸ್.ಎಸ್. ಅಲ್ಲಿ ಮೂರು ಉಪನ್ಯಾಸಗಳನ್ನು ನೀಡಿದರು. ಅದನ್ನು 'ಕನ್ನಡ ಕವಿಗಳ ಕಾವ್ಯಕಲ್ಪನೆ' ಎಂಬ ಹೆಸರಿನ ಹೊತ್ತಿಗೆಯಲ್ಲಿ ೧೯೮೮ರಲ್ಲಿ ಪ್ರಕಟಿಸಲಾಯಿತು. ಇದು ಮುಖ್ಯವಾಗಿ ಪ್ರಾಚೀನ ಕನ್ನಡ ಕವಿಗಳ ಕಾವ್ಯಕಲ್ಪನೆಯನ್ನು ಕುರಿತಿದೆ.

ತಾತ್ವಿಕವಾಗಿ ಕನ್ನಡ ಕಾವ್ಯ ಪರಂಪರೆಯನ್ನು ವ್ಯಾಖ್ಯಾನಿಸುವ ಅವರ ಮತ್ತೊಂದು ಪ್ರಯತ್ನವೆಂದರೆ 'ಕನ್ನಡ ಸಾಹಿತ್ಯ ಸಮೀಕ್ಷೆ' ಕನ್ನಡ ಸಾಹಿತ್ಯ ಮೀಮಾಂಸೆಯ ಚೌಕಟ್ಟು ರಚಿಸಲು ಬೇಕಾದ ಮೂಲಭೂತ ಅಂಶಗಳನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ.

## ವಿಮರ್ಶೆ

ಕನ್ನಡ ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿ ಜಿ.ಎಸ್. ಶಿವರುದ್ರಪ್ಪನವರ ಹೆಸರು ಚಿರಪರಿಚಿತವೆಂದು ಬೇರೆ ಹೇಳಬೇಕಾಗಿಲ್ಲ. ಸೃಜನ, ವಿಮರ್ಶೆ, ಮೀಮಾಂಸೆ, ಅಧ್ಯಯನ, ಅಧ್ಯಾಪನ, ಆಡಳಿತ ಮತ್ತು ಸಂಘಟನೆ ಮುಂತಾದ ಮಾರ್ಗಗಳಲ್ಲಿ ಸಾಗಿ ಬಂದಿರುವ ಜಿ.ಎಸ್.ಎಸ್. ಕನ್ನಡ ಸಾಹಿತ್ಯಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ.

ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಅವರ ಪಾತ್ರ ಹಿರಿದಾಗಿದೆ. ಇವರು ಬೆಂಗಳೂರು ವಿಶ್ವ ವಿದ್ಯಾಲಯದಲ್ಲಿ ಪ್ರಾರಂಭಿಸಿದ 'ಸಾಹಿತ್ಯ ವಾರ್ಷಿಕ'ದಂತಹ ಯೋಜನೆಗಳು ದಾಖಲೆಯ ಜೊತೆಗೆ ವಿಮರ್ಶೆಯ ಬೆಳವಣಿಗೆಯ ದಿಕ್ಕನ್ನು ಕೂಡ ಸಾಧಿಸಲು ಸಮರ್ಥವಾಗಿವೆ.

"ಜಿ.ಎಸ್.ಎಸ್. ಅವರು ವಿಮರ್ಶೆ ಕ್ಷೇತ್ರಕ್ಕೆ ಪ್ರವೇಶಿಸಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಕೃತಿಗಳನ್ನು ಆಧುನಿಕ ಸಂವೇದನೆಗಳಿಂದ ಹಾಗೂ ಶುದ್ದ ಕಾವ್ಯದ ನೆಲೆಯಿಂದ ಪರಿಶೀಲಿಸಬೇಕೆಂಬ ಚಿಂತನೆಗಳು ಪ್ರಧಾನವಾಗಿದ್ದವೆಂದು" ಡಾ. ಕೆ. ವಿ. ನಾರಾಯಣ ಅವರು ಬರೆಯುತ್ತಾರೆ. ಶಿವರುದ್ರಪ್ಪನವರು ಸಹ "ನಾನು ಕವಿತೆ ಮತ್ತು ಸಾಹಿತ್ಯ ವಿಮರ್ಶೆಯನ್ನು ಪ್ರಾರಂಭಿಸಿದ್ದೆ ನವೋದಯದ ಉತ್ಕರ್ಷದ ಕಾಲದಲ್ಲಿ ಮತ್ತು ನನ್ನ ಸಾಹಿತ್ಯಕ ವ್ಯಕ್ತಿತ್ವ ರೂಪುಗೊಂಡದ್ದು ಹಾಗೂ ಬೆಳೆದದ್ದು ನವೋದಯದ ಕಾಲ ಮಾನದ ಸತ್ವದಿಂದಲೇ", ಎಂದು ತಿಳಿಸುತ್ತಾರೆ. ಕನ್ನಡ ನವೋದಯ ವಿಮರ್ಶೆಯ ವಿಚಾರ ಮೂಲವಾದಿ ಆಕೃತಿಗಳನ್ನು ಇಡಿಯಾಗಿ ಕನ್ನಡ ಸಾಹಿತ್ಯ ಪರಂಪರೆ ಮತ್ತು ಸಮಕಾಲೀನ ಕಾವ್ಯಕ್ಕೆ ಸಮರ್ಥವಾಗಿ ಅನ್ವಯಿಸುವ ಜಿ.ಎಸ್.ಎಸ್. ಅವರ 'ಸೌಂದರ್ಯ ಸಮೀಕ್ಷೆ' ಅವರ ವಿಮರ್ಶಾ ಪ್ರಯತ್ನದ ಪ್ರಮುಖ ಹಂತ. ಅಲ್ಲಿಂದೀಚೆಗೆ ಅವರ ವಿಮರ್ಶಾ ನಿಲುವುಗಳಲ್ಲಿ ಬೆಳವಣಿಗೆ ಮತ್ತು ಬದಲಾವಣೆಗಳು ಕಂಡು ಬಂದಿವೆ ಎಂದು ವಿಮರ್ಶಕರು ತಿಳಿಸುತ್ತಾರೆ. ಈ ಮೇಲಿನ ಹೇಳಿಕೆಗಳು ಅವರು ವಿಮರ್ಶಾ ಲೋಕದಲ್ಲಿ ಪ್ರವೇಶಿಸಿ ಸಾಗಿ ಬಂದ ದಾರಿಯನ್ನು ಕುರಿತು ಸ್ಪಷ್ಟಪಡಿಸುತ್ತವೆ.

ಜಿ.ಎಸ್.ಎಸ್. ಅವರ ಕೃತಿಗಳಾದ 'ವಿಮರ್ಶೆಯ ಪೂರ್ವ-ಪಶ್ಚಿಮ', 'ಪರಿಶೀಲನ' 'ಗತಿಬಿಂಬ', 'ನವೋದಯ,' 'ಹಿನ್ನೆಲೆ' ಮತ್ತು 'ಬೆಡಗು' ಮುಂತಾದವು ಕನ್ನಡದ ವಿಮರ್ಶಾಲೋಕಕ್ಕೆ ಮಹತ್ವದ ಕಾಣಿಕೆಗಳಾಗಿವೆ. ಈ ಎಲ್ಲಾ ಕೃತಿಗಳ ಪುಟ-ಪುಟಗಳಲ್ಲಿ ವಿಮರ್ಶೆಯ ಪ್ರೌಢಿಮೆಯನ್ನು ಕಾಣಬಹುದಾಗಿದೆ.

೧೯೬೧ರಲ್ಲಿ ಪ್ರಕಟಗೊಂಡ 'ವಿಮರ್ಶೆಯ ಪೂರ್ವ ಪಶ್ಚಿಮ' ವಿಮರ್ಶೆಗೆ ಸಂಬಂಧಿಸಿದಂತೆ, ಜಿ.ಎಸ್. ಎಸ್ .ಅವರ ಒಂದು ಮಹತ್ವದ ಕೃತಿ. ಇದು ವಿಮರ್ಶೆಯ ತತ್ವಗಳನ್ನು ಕುರಿತು ತಿಳಿಸುತ್ತದೆ. ಹಳಗನ್ನಡದಿಂದ, ಹೊಸಗನ್ನಡದಿಂದ ಸಂಸ್ಕೃತ ದಿಂದ ಮತ್ತು ಇಂಗ್ಲಿಷಿನಿಂದ ವಿಚಾರ ನಿರೂಪಣೆಯ ಸಾಮಗ್ರಿಗಳನ್ನು ಹಾಗೂ ನಿದರ್ಶನಗಳನ್ನು ಬಳಸಿಕೊಳ್ಳಲಾಗಿದೆ. ವಿಮರ್ಶೆಯ ದಾರಿ, ನಮಗೂ ಕೃತಿಗೂ ನಡುವೆ, ಕವಿ-ವ್ಯಕ್ತಿ, ದರ್ಶನ ವಿಮರ್ಶೆ ಮತ್ತು ವಿಮರ್ಶೆಯಲ್ಲಿ ಏರುಪೇರು ಮುಂತಾದ ಹನ್ನೆರಡು ಲೇಖನಗಳನ್ನು ಈ ಕೃತಿಯಲ್ಲಿ ಅಳವಡಿಸಲಾಗಿದೆ.

ನಂತರ ಬಂದ 'ಪರಿಶೀಲನ' ಕೃತಿಯು ವಿಮರ್ಶೆಯ ದಿಕ್ಕಿನಲ್ಲಿ ಮತ್ತೊಂದು ಪ್ರಮುಖ ಸಂಕಲನ. ಇದು ೧೯೬೭ರಲ್ಲಿ ಪ್ರಕಟಗೊಂಡಿತು. ಇಲ್ಲಿನ ಹದಿನೈದು

ಲೇಖನಗಳಲ್ಲಿ ಮೊದಲ ಹದಿನಾಲ್ಕು ಲೇಖನಗಳು ಕನ್ನಡ ಸಾಹಿತ್ಯ ಪರಂಪರೆಯ ಪ್ರಮುಖ ಘಟ್ಟಗಳನ್ನು ಪರಿಶೀಲಿಸುವ ಪ್ರಯತ್ನದ ಪರಿಣಾಮಗಳಾಗಿವೆ. ಪರಂಪರೆ ಮತ್ತು ಪ್ರಯೋಗಶೀಲತೆಯಲ್ಲಿ ನಮ್ಮ ಕನ್ನಡದ ಕೆಲವು ಕವಿಗಳು ಹೇಗೆ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾರೆ ಎನ್ನುವುದನ್ನು ಅಂದಂದಿನ ಯುಗಧರ್ಮ ಹಾಗೂ ಕವಿ ಮನೋಧರ್ಮಗಳನ್ನು ಹಿನ್ನೆಲೆಯಲ್ಲಿರಿಸಿಕೊಂಡು ನೋಡುವುದು ಕೃತಿಕಾರರ ಉದ್ದೇಶವಾಗಿದೆ. 'ಪರಿಶೀಲನ'ದ ಲೇಖನಗಳು ಈ ಮೊದಲು ಪ್ರಬುದ್ಧ ಕರ್ಣಾಟಕ ಮತ್ತು ಕೆಲವು ಸಂಭಾವನಾ ಗ್ರಂಥಗಳಲ್ಲಿ ಪ್ರಕಟವಾಗಿವೆ. 'ಪರಿಶೀಲನ' ಕೃತಿಯು ನಾಡಿನ ಗಣ್ಯ ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದೆ.

ಮತ್ತೊಂದು ಕೃತಿ 'ಗತಿಬಿಂಬ' 'ಪರಿಶೀಲನ' ದಂತೆ ವಿಮರ್ಶೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. ೧೯೬೯ರಲ್ಲಿ ಪ್ರಕಟಗೊಂಡ ಈ ಕೃತಿ ಮುಖ್ಯವಾಗಿ ಕನ್ನಡ ಕಾವ್ಯ ಪರಂಪರೆಯ ಬೆಳವಣಿಗೆ ಹಾಗೂ ಪ್ರಮುಖ ಧೋರಣೆಗಳನ್ನು ಕುರಿತ ವಿಚಾರಗಳುಳ್ಳ ಲೇಖನಗಳಾದ ಹೊಸ ಕಾವ್ಯದ ಹೊಯ್ದಾಟ, ಪ್ರೇರಣೆ - ಪರಂಪರೆ - ಪ್ರಯೋಗ ಹಾಗೂ ಇಂದಿನ ಕವಿತೆ, ಕಾವ್ಯಮೀಮಾಂಸೆ ಮತ್ತು ವಿಮರ್ಶೆಯ ವಿಚಾರಗಳನ್ನು ಹೇಳುವ ಲೇಖನಗಳಾದ ಸಮಕಾಲೀನ ಪ್ರಜ್ಞೆ, ಸಾಹಿತ್ಯದಲ್ಲಿ ಪ್ರಾಮಾಣಿಕತೆ, ಕವಿ ಸಹೃದಯ, ಸಾಹಿತ್ಯ ಜೀವನದ ಗತಿಬಿಂಬ, ಕವಿಯಲ್ಲಿ ವಿಶಿಷ್ಟತೆ, ವಿಮರ್ಶೆ ಮತ್ತು ಕಾಲಾತೀತ ಸ್ಥಿತಿ ಮುಂತಾದ ಹನ್ನೊಂದು ಲೇಖನಗಳನ್ನು ಒಳಗೊಂಡಿದೆ.

೧೯೭೭ರಲ್ಲಿ ಪ್ರಕಟಗೊಂಡ ಜಿ.ಎಸ್.ಎಸ್. ಅವರ ಇನ್ನೊಂದು ವಿಮರ್ಶಾ ಕೃತಿ 'ನವೋದಯ'. ಇದರಲ್ಲಿನ ಹದಿನೆಂಟು ಲೇಖನಗಳು ಆಧುನಿಕ ಸಾಹಿತ್ಯ ಕೃತಿಗಳ ಬಗೆಗೆ ಸಮರ್ಥ ಒಳನೋಟಗಳನ್ನು ನೀಡುತ್ತವೆ. ಕುವೆಂಪು, ಪು.ತಿ.ನ., ಬೇಂದ್ರೆ, ಕೆ.ಎಸ್.ನ., ಅವರ ಸಾಹಿತ್ಯವನ್ನು ವಿಮರ್ಶಿಸುವ ಇಲ್ಲಿನ ಲೇಖನಗಳು ಈಗ ಪರಾಮರ್ಶನ ಸಾಹಿತ್ಯದ ಭಾಗವಾಗಿದೆ. ಆಧುನಿಕ ಕನ್ನಡ ಕಾವ್ಯದ ಅಧ್ಯಯನಕ್ಕೆ ಲೇಖಕರ ಗಮನ ಕೇಂದ್ರಿಕೃತವಾಗಿದೆ. ಜಿ.ಎಸ್.ಎಸ್. ಅವರ 'ಅನುರಣನ' ೧೯೭೮ರಲ್ಲಿ ಪ್ರಕಟಗೊಂಡ ಮತ್ತೊಂದು ವಿಮರ್ಶಾ ಕೃತಿ. ಇದರಲ್ಲಿ ವಚನ ಮತ್ತು ವಚನಕಾರರನ್ನು ಕುರಿತಂತೆ ಒಂಬತ್ತು ವಿಮರ್ಶಾತ್ಮಕ ಲೇಖನಗಳನ್ನು ಅಳವಡಿಸಲಾಗಿದೆ. ೧೯೮೭ರಲ್ಲಿ ಪ್ರಕಟ ಗೊಂಡ 'ಹಿನ್ನೆಲೆ' ಜಿ.ಎಸ್.ಎಸ್. ಅವರ ಮತ್ತೊಂದು ವಿಮರ್ಶಾ ಕೃತಿ. ಇಲ್ಲಿನ ಲೇಖನಗಳನ್ನು ಎರಡು ಭಾಗಗಳಾಗಿ ಅಳವಡಿಸಲಾಗಿದೆ. ಮೊದಲನೆಯ ಭಾಗ, ಸಾಹಿತ್ಯ ವಿಮರ್ಶೆಯ ವಿಚಾರಗಳನ್ನು ಮತ್ತು ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಏಳಬಹುದಾದ ಚರ್ಚೆಗಳನ್ನು ಒಳಗೊಂಡಿದೆ. ಎರಡನೆಯ ಭಾಗದಲ್ಲಿ ನಿರ್ದಿಷ್ಟವಾದ ಕೃತಿಗಳನ್ನು ಹಾಗೂ ಸಾಹಿತ್ಯ ನಿರ್ಮಿತಿಯನ್ನು ಕುರಿತ ವಿಮರ್ಶೆ ಇದೆ. 'ಬೆಡಗು' ಶಿವರುದ್ರಪ್ಪನವರ ಹನ್ನೆರಡನೆಯ ವಿಮರ್ಶಾ ಕೃತಿ. ಇದು ೧೯೮೯ನೇ ವರ್ಷದಲ್ಲಿ ಪ್ರಕಟಗೊಂಡಿದೆ. ಈ ಕೃತಿಯ ಕೆಲವು ಲೇಖನಗಳು ಜಿ.ಎಸ್.ಎಸ್. ಆಗಾಗ

ಭಾಗವಹಿಸಿದ ವಿಚಾರ ಸಂಕಿರಣಗಳ ಸಂದರ್ಭದಲ್ಲಿ ಮಾಡಿದ ಉಪನ್ಯಾಸಗಳ ಲಿಖಿತರೂಪವಾಗಿವೆ. ಮೊದಲ ಮೂರು ಲೇಖನಗಳು ನವೋದಯ ಸಾಹಿತ್ಯಕ್ಕೆ ಸಂಬಂಧಪಡುತ್ತವೆ. ಅನಂತರದ ಮೂರು ಮತ್ತು ಹತ್ತನೇ ಲೇಖನಗಳು ಕನ್ನಡ ಸಾಹಿತ್ಯದ ಜನಪರ ಹಾಗೂ ಸಾಮಾಜಿಕ ನಿಲುವುಗಳ ವಿವೇಚನೆಯನ್ನು ಕುರಿತಿವೆ. ಏಳು, ಎಂಟು, ಒಂಬತ್ತು ಮತ್ತು ಹನ್ನೊಂದನೇ ಲೇಖನಗಳು ಧಾರ್ಮಿಕ ಅನುಭಾವಿಕ ಕ್ಷೇತ್ರಗಳಿಗೆ ಸಂಬಂಧಿಸಿದ ಅಭಿವ್ಯಕ್ತಿಗಳ ಪರಿಶೀಲನೆ ಗಳಾಗಿವೆ. ಕೊನೆಯ ಎರಡು ಲೇಖನಗಳು ಪ್ರಾಚೀನ ಸಾಹಿತ್ಯಕ್ಕೆ ಸಂಬಂಧಿಸಿವೆ.

ಜಿ.ಎಸ್.ಎಸ್. ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಬರೆದ ವಿಮರ್ಶಾ ಲೇಖನಗಳು ಈಗಾಗಲೇ ಬೇರೆ ಬೇರೆ ಹೆಸರಿನ ಹಲವು ಸಂಕಲನಗಳಲ್ಲಿ ಪ್ರಕಟವಾಗಿವೆ. ವಿಮರ್ಶಾತ್ಮಕ ಸ್ವರೂಪದ ಈ ಬರಹಗಳನ್ನು ವಿಷಯಾನುಕ್ರಮವಾಗಿ ಅಳವಡಿಸಿ ಮೂರು ಸಂಪುಟಗಳಲ್ಲಿ ಹೊರತರಬೇಕೆಂದು ಯೋಜನೆಯೊಂದನ್ನು ಸಿದ್ಧಪಡಿಸ ಲಾಯಿತು. ಇದರ ಫಲವಾಗಿ ೧೯೯೩ರಲ್ಲಿ ಜಿ.ಎಸ್.ಎಸ್. ಅವರ 'ಸಮಗ್ರಗದ್ಯ'ದ ಮೊದಲ ಸಂಪುಟ ಕನ್ನಡದ ಗ್ರಂಥ ಲೋಕಕ್ಕೆ ಸೇರ್ಪಡೆಯಾಯಿತು. ಇದರಲ್ಲಿ 'ಪರಿಶೀಲನ', 'ಅನುರಣನ', 'ಪ್ರತಿಕ್ರಿಯೆ', ಮತ್ತು 'ಬೆಡಗು' ಕೃತಿಗಳಿಂದ ಆಯ್ದ ಮೂವ್ವತ್ತೆರಡು ಲೇಖನಗಳಿವೆ. ಈ ಎಲ್ಲಾ ಲೇಖನಗಳು ಮುಖ್ಯವಾಗಿ ಪ್ರಾಚೀನ ಸಾಹಿತ್ಯಕ್ಕೆ ಸಂಬಂಧಿಸಿವೆ. ಇಲ್ಲಿನ ಲೇಖನಗಳಲ್ಲಿ ಕನ್ನಡದ ಪ್ರಮುಖ ಕವಿಗಳು ಹಾಗೂ ಸಾಹಿತ್ಯ ಸಂದರ್ಭಗಳು ಒಂದು ಪರಂಪರೆಯ ನಿರ್ಮಾಣದಲ್ಲಿ ವಹಿಸಿರುವ ಪಾತ್ರವೇನು ಎನ್ನುವುದರ ಕಡೆಗೆ ಲೇಖಕರ ಗಮನವಿದೆ, ಆದ್ದರಿಂದ ಈ ಸಂಪುಟಕ್ಕೆ 'ಹಿಂದಣ ಹೆಜ್ಜೆ' ಎಂಬ ಉಪಶೀರ್ಷಿಕೆ ಕೊಡಲಾಗಿದೆ. ಇದನ್ನು (ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನರಿಯಬಾರದು) ಅಲ್ಲಮ ಪ್ರಭುವಿನ ಉಕ್ತಿಯಿಂದ ಎತ್ತಿಕೊಳ್ಳಲಾಗಿದೆ. ಪರಂಪರೆ ಎನ್ನುವುದು ಹಿಂದಣ ಹೆಜ್ಜೆ ಗುರುತುಗಳ ಒಂದು ಸುದೀರ್ಘಪಥ.

೧೯೯೪ರಲ್ಲಿ ಪ್ರಕಟಗೊಂಡ 'ಸಮಗ್ರಗದ್ಯ'ದ ಎರಡನೇ ಸಂಪುಟವು ಮೊದಲ ಸಂಪುಟದ ಮುಂದುವರಿಕೆಯಾಗಿದೆ. ಇದರಲ್ಲಿ ಮುಖ್ಯವಾಗಿ ಆಧುನಿಕ ಸಾಹಿತ್ಯವನ್ನು ಅದಕ್ಕೆ ಸಂಬಂಧಿಸಿದ ಸಾಹಿತ್ಯ ತತ್ವ ಹಾಗೂ ಸಾಹಿತ್ಯ ವಿಮರ್ಶೆಯನ್ನು ಒಳಗೊಂಡ ಒಟ್ಟು ನಲವತ್ತೈದು ಲೇಖನಗಳಿವೆ. ಇವುಗಳನ್ನು 'ಗತಿಬಿಂಬ', 'ನವೋದಯ', 'ಪ್ರತಿಕ್ರಿಯೆ' ಮತ್ತು 'ಬೆಡಗು' ಕೃತಿಗಳಿಂದ ಆಯ್ದುಕೊಳ್ಳಲಾಗಿದೆ. ವಸ್ತು ಮತ್ತು ಧೋರಣೆಗೆ ಅನುಗುಣವಾಗಿ ಲೇಖನಗಳನ್ನು ಒಂದು ಕ್ರಮದಲ್ಲಿ ಜೋಡಿಸಲಾಗಿದೆ.

ಹೀಗೆ ಕನ್ನಡ ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿ ಜಿ.ಎಸ್.ಎಸ್. ಪ್ರಮುಖ ಸ್ಥಾನವನ್ನು ಅಲಂಕರಿಸಿದ್ದಾರೆ. ಅವರ ಕೃತಿಗಳು ವಿಮರ್ಶೆಯ ಮೈಲಿಗಲ್ಲುಗಳಾಗಿವೆ. ಹಾಗೂ ವಿಮರ್ಶೆಯ ಶ್ರೇಷ್ಠತೆಯನ್ನು ಕಾಪಾಡಿಕೊಂಡು ಬಂದಿವೆ.

**ಪ್ರವಾಸ ಸಾಹಿತ್ಯ, ನಾಟಕ ಮತ್ತು ಇತರೆ**

ಜಿ.ಎಸ್.ಎಸ್. ಪ್ರವಾಸ ಸಾಹಿತ್ಯ ಮತ್ತು ನಾಟಕಗಳನ್ನು ರಚಿಸಿ ತಮ್ಮ ಸಾಹಿತ್ಯ ಬದುಕಿನ ಬಹುಮುಖವನ್ನು ಪರಿಚಯಿಸುತ್ತಾರೆ. ಶ್ರೀಯುತರು ಹಿಂದಿನ ಸೋವಿಯಟ್ ರಷ್ಯಾ ಪ್ರವಾಸದ ತಮ್ಮ ಇಪ್ಪತ್ತೆರಡು ದಿನಗಳ ಅನುಭವ ಕುರಿತಂತೆ 'ಮಾಸ್ಕೊದಲ್ಲಿ ಇಪ್ಪತ್ತೆರಡು ದಿನ' ಎಂಬ ಪ್ರವಾಸ ಕಥನ ರಚಿಸಿದರು. ಜಿ.ಎಸ್.ಎಸ್. ತಮ್ಮ ಕೃತಿಯಲ್ಲಿ ಮಾಸ್ಕೊ ನಗರದ ಸಾರಿಗೆ ವ್ಯವಸ್ಥೆ, ಜನರಿಗಿರುವ ಸೌಲಭ್ಯಗಳು, ವಿದ್ಯಾಭ್ಯಾಸ ಪದ್ಧತಿ, ರಸ್ತೆಗಳ ಪಕ್ಕದಲ್ಲಿನ ಸಸ್ಯಸಂಪತ್ತು, ರಂಗಮಂದಿರಗಳು, ರಷ್ಯನ್ ಗಂಡು ಹೆಣ್ಣುಗಳ ಸ್ವಾತಂತ್ರ್ಯ ಹಾಗೂ ಭದ್ರತೆ ಮತ್ತು ವ್ಯಕ್ತಿತ್ವ ವಿಕಾಸದ ಘೋಷಣೆಗಳನ್ನು ಕುರಿತು ಸರಳವಾಗಿ ಸುಂದರವಾಗಿ ಚಿತ್ರಿಸುತ್ತಾರೆ. ಈ ಕೃತಿಯು ೧೯೭೩ರಲ್ಲಿ ಪ್ರಕಟಗೊಂಡು ಸೋವಿಯಟ್ ಲ್ಯಾಂಡ್ ನೆಹರೂ ಪ್ರಶಸ್ತಿಯನ್ನು ಸಹ ಪಡೆದುಕೊಂಡಿತು. ಜಿ.ಎಸ್.ಎಸ್. ಅವರ ಇನ್ನೆರಡು ಪ್ರವಾಸ ಕಥನಗಳಾದ 'ಗಂಗೆಯ ಶಿಖರಗಳಲ್ಲಿ' ಮತ್ತು 'ಅಮೇರಿಕದಲ್ಲಿ ಕನ್ನಡಿಗ' ಎಂಬುವುಗಳನ್ನು ಈ ಸಾಲಿನಲ್ಲಿ ಹೆಸರಿಸಬಹುದು.

'ಚತುರಂಗ' ಎಂಬ ಆತ್ಮಕಥನದಲ್ಲಿ ಜಿ.ಎಸ್.ಎಸ್. ತಮ್ಮ ಜೀವನದ ಬೇರೆ ಬೇರೆ ಹಂತಗಳನ್ನು, ನೆಲೆಗಳನ್ನು ಹಾಗೂ ಏರಿಳಿತಗಳನ್ನು ಗಮನಿಸಿ, ಅವುಗಳಲ್ಲಿ ಬಹು ಮುಖ್ಯವಾದ ವಿವರಗಳನ್ನು ತುಂಬಿ ಈ ಆತ್ಮಕಥನ ಬರೆದಿದ್ದಾರೆ. ಡಾ. ಕೆ.ವಿ. ನಾರಾಯಣ ಅವರು, "ಪೂರ್ಣ ಪ್ರಮಾಣದ ಆತ್ಮಕಥನದ ಹರವು ಇದಕ್ಕಿಲ್ಲ. ಹೀಗಾಗಿ ಇದರ ಆಸಕ್ತಿಯೇ ಸೀಮಿತ" ಎಂದು ತಿಳಿಸುತ್ತಾರೆ.

ರಾಘವಾಂಕ ಕವಿಯ 'ಸಿದ್ಧರಾಮ ಚಾರಿತ್ರ್ಯ'ದ ಆಧಾರದಿಂದ ರಚಿತಗೊಂಡ 'ಕರ್ಮಯೋಗಿ' ಶಿವರುದ್ರಪ್ಪನವರ ಮತ್ತೊಂದು ಕೃತಿಯಾಗಿದೆ. ಇದು ೧೯೫೭ರಲ್ಲಿ ಪ್ರಕಟಗೊಂಡು ಪಿಯುಸಿ ತರಗತಿಗೆ ಪಠ್ಯ ಪುಸ್ತಕವಾಗಿ ಆಯ್ಕೆಗೊಂಡಿತ್ತು. ಸಿದ್ಧರಾಮ ಐತಿಹಾಸಿಕ ವ್ಯಕ್ತಿಯಾಗಿರುವುದಕ್ಕಿಂತ ಪೌರಾಣಿಕ ವ್ಯಕ್ತಿಯಾಗಿ ಹೆಚ್ಚಿನ ಪ್ರಾಶಸ್ತ್ಯ ಪಡೆದಿದ್ದಾನೆ. ಕೃತಿಯು ಸಿದ್ಧರಾಮನ ಜನನದಿಂದ ಮೊದಲಾಗುತ್ತದೆ. ವಿದ್ಯಾರ್ಥಿಗಳಿಗೆ 'ಕರ್ಮಯೋಗಿ' ಪಾಠ ಹೇಳಿದ ಎಂ.ವಿ. ಸೀತಾರಾಮಯ್ಯನವರು, ಇದೊಂದು ಹೊಸ ಬಗೆಯ ಜೀವನ ಚರಿತ್ರೆ ಎನಿಸಿತೆನ್ನುತ್ತಾರೆ.

ಜಿ.ಎಸ್.ಎಸ್. ಮಿತ್ರರೊಡಗೂಡಿ ಕೆಲವು ನಾಟಕಗಳನ್ನು ಸಹ ಬರೆದಿದ್ದಾರೆ. 'ರಾಣಿ ದುರ್ಗಾವತಿ' (೨೦ ನಿಮಿಷ), 'ಮಹಾಸಂಗಮ' ಮತ್ತು 'ನಾದಸೇತು' (೩೦ ನಿಮಿಷ) ಹಾಗೂ 'ಅವಳು ತೋರಿದ ಬೆಳಕು' (೫೦ ನಿಮಿಷ). ರಾಣಿದುರ್ಗಾವತಿ ಐತಿಹಾಸಿಕ ನಾಟಕವಾದರೆ, ಮಹಾಸಂಗಮ, ನಾದಸೇತು ಮತ್ತು ಅವಳು ತೋರಿದ ಬೆಳಕು ಐತಿಹಾಸಿಕವೂ, ಪೌರಾಣಿಕವೂ ಆದ ನಾಟಕಗಳಾಗಿವೆ. 'ರಾಣಿದುರ್ಗಾವತಿ'ಯ ಕಥಾವಸ್ತು ಅಕ್ಬರನ ಕಾಲದ ಚರಿತ್ರೆಯ ಒಂದು ಸಣ್ಣ ಘಟನೆಯನ್ನು ಆಧರಿಸಿದೆ. ಅಕ್ಬರನ ಸೇನಾನಿ ಅಫಸಲಖಾನನು ಗೊಂಡವಾನದ ರಾಣಿ ದುರ್ಗಾವತಿಯ ವಿರುದ್ಧ ಯುದ್ಧ

ಮಾಡುತ್ತಾನೆ. ಆದರೆ ಶತ್ರುಗಳ ವಶಳಾಗುವ ಮೊದಲೇ ರಾಣಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದು ನಾಟಕದ ಕಥಾವಸ್ತು.

'ಮಹಾಸಂಗಮ' ಮತ್ತು 'ನಾದಸೇತು'ಗಳ ಕಥಾವಸ್ತು, ಹನ್ನೆರಡನೆಯ ಶತಮಾನದಲ್ಲಿ ಬಾಳಿ ಬದುಕಿದ ಬಸವಣ್ಣ ಮತ್ತು ಅಲ್ಲಮರ ಜೀವನದ ಪ್ರಮುಖ ಘಟನೆಗಳಾಗಿವೆ. ಇವು ಇನ್ನೊಂದು ದೃಷ್ಟಿಯಿಂದ ಪೌರಾಣಿಕ ನಾಟಕಗಳು ಹೌದು. 'ಅವಳು ತೋರಿದ ಬೆಳಕು' ನಾಟಕ ಪ್ರೊ . ರಾಹುಲ ಸಾಂಕೃತ್ಯಾಯನ ಅವರ 'ಪ್ರಭಾ' ಎಂಬ ಸಣ್ಣ ಕತೆಯ ಆಧಾರದ ಮೇಲೆ ರಚಿತವಾಗಿದೆ. ಜಿ.ಎಸ್.ಎಸ್. ಅವರು ಕಾದಂಬರಿಯನ್ನು ಸಹ ಬರೆದಿದ್ದರು. ಅವರ 'ಚಕ್ರವ್ಯೂಹ' ಸಮಾಜದಲ್ಲಿನ ಅನ್ಯಾಯ ಭ್ರಷ್ಟಾಚಾರಗಳ ಚಕ್ರವ್ಯೂಹದಲ್ಲಿ ಸಿಕ್ಕು ಒದ್ದಾಡುವ ಪ್ರಾಮಾಣಿಕ ಗುಮಾಸ್ತೆಯೊಬ್ಬನ ಕತೆ. ಇದನ್ನು ತ.ಸು. ಶಾಮರಾಯರು ಪ್ರಕಟಿಸಬೇಕೆಂದು ಕೊಂಡಿದ್ದರು. ಆಮೇಲೆ ಅದು ಮರತೇಹೋಯಿತು. ಮಠಗಳು ಮತ್ತು ಸ್ವಾಮಿಗಳನ್ನು ಕುರಿತ ಇನ್ನೊಂದು ಕಾದಂಬರಿಯ ವಸ್ತು ಅವರ ಮನಸ್ಸಿನಲ್ಲಿ ಮೂಡಿ ಹಾಗೇ ಕರಗಿಹೋಯಿತು. ಬರವಣಿಗೆಗೆ ಅದು ಒಳಗಾಗಲಿಲ್ಲ. ಅದರ ರೂಪರೇಷೆಗಳನ್ನು ಮಾತ್ರ ಸ್ನೇಹಿತರಲ್ಲಿ ಹೇಳಿಕೊಂಡಿದ್ದರು.

ಇನ್ನು ಜಿ.ಎಸ್.ಎಸ್. ಸಂಪಾದಿಸಿರುವ ಕೃತಿಗಳತ್ತ ಗಮನ ಹರಿಸೋಣ. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ, ಅವರು ಕೈಗೊಂಡ ಯೋಜನೆಗಳು ಮಹತ್ವದ್ದಾಗಿವೆ. 'ಸಾಹಿತ್ಯವಾರ್ಷಿಕ' ಕನ್ನಡದಲ್ಲಿ ಆಯಾ ವರ್ಷದಲ್ಲಿ ಹೊರಬಂದ, ಹೊರಬರುತ್ತಿರುವ ಸಾಹಿತ್ಯಕೃತಿಗಳ ಒಂದು ಸಮಗ್ರಪಟ್ಟಿಯನ್ನು ಮತ್ತು ಅವುಗಳ ವಿಮರ್ಶೆಯನ್ನು ಒಳಗೊಂಡಿದೆ. ಇದು ಸಾಹಿತ್ಯಾಭ್ಯಾಸಿಗಳಿಗೆ ವರದಾನವಾಗಿದೆ. ೧೯೭೧ರಿಂದ ೧೯೭೮ರವರೆಗಿನ 'ಸಾಹಿತ್ಯ ವಾರ್ಷಿಕ'ಗಳು ಜಿ.ಎಸ್.ಎಸ್. ಅವರ ಸಂಪಾದಕತ್ವ ದಲ್ಲಿ ಹೊರಬಂದಿವೆ. ಇವು ಅವರ ಸಾಹಿತ್ಯದ ಧ್ಯೇಯಧೋರಣೆಗಳನ್ನು ಪ್ರತಿಬಿಂಬಿಸುತ್ತವೆ.

ಇವರ ಮತ್ತೊಂದು ಸಂಪಾದಿತ ಕೃತಿ ಕೆ.ಎಸ್. ನರಸಿಂಹಸ್ವಾಮಿ ಅವರ ಅಭಿನಂದನ ಗ್ರಂಥ 'ಚಂದನ'. ಈ ಗ್ರಂಥ ಇತರ ಸಂಭಾವನಾ ಗ್ರಂಥಗಳಿಗಿಂತ ವಿಶಿಷ್ಟವಾಗಿರುವಂತೆ ನೋಡಿಕೊಂಡಿರುವುದಾಗಿ ಸಂಪಾದಕರು ಹೇಳಿದ್ದಾರೆ. ಜಿ.ಎಸ್.ಎಸ್. ಇತರರೊಡನೆ ಸಂಪಾದಿಸಿರುವ ಎರಡು ವಿಮರ್ಶೆಯ ಕೃತಿಗಳಾದ 'ದರ್ಶನ ವಿಮರ್ಶೆ' ಮತ್ತು 'ಪ್ರಾಯೋಗಿಕ ವಿಮರ್ಶೆ'ಗಳನ್ನು ಇಲ್ಲಿ ಹೆಸರಿಸಬಹುದು. ಸಾಹಿತ್ಯ ವಿಮರ್ಶೆಯಲ್ಲಿ 'ದರ್ಶನ ವಿಮರ್ಶೆ' ಅತ್ಯಂತ ಶ್ರೇಷ್ಠವಾದುದು.

ಜಿ.ಎಸ್.ಎಸ್. ಅವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬಂದಿರುವ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಪುಟಗಳು ಬಹುಮುಖ್ಯವಾದವು. 'ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು,' 'ವಾಕ್ಯಮಾಣಿಕ್ಯಕೋಶ' 'ಕಾವ್ಯಾರ್ಥ ಪದಕೋಶ'

'ಹಳಗನ್ನಡ ಕಾವ್ಯ ಸಂಗ್ರಹ' 'ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯಗಳು' 'ಚಿಂತನ ದೀಪ್ತಿ' 'ಕನ್ನಡ ವಿಮರ್ಶೆಯ ನೆಲೆ - ಬೆಲೆ' ಮುಂತಾದ ಸಂಪಾದಿತ ಕೃತಿಗಳನ್ನು ಹೆಸರಿಸಬಹುದು. ಇವುಗಳು ಸ್ವಂತ ಕೃತಿಗಳಷ್ಟೆ ಸಾಹಿತ್ಯದ ಮೌಲ್ಯವನ್ನು ಪಡೆದು ಕೊಂಡಿವೆ. ಅನುವಾದಿತ ಕೃತಿಗಳಲ್ಲಿ 'ಭಾರತೀಯ ಪರಂಪರೆ', ಮತ್ತು 'ಟಾಲ್‌ಸ್ಟಾಯ್ ವಿಚಾರ ಧಾರೆ' ಮುಖ್ಯವಾಗಿವೆ.

ಡಾ. ಜಿ.ಎಸ್. ಶಿವರುದ್ರಪ್ಪನವರಿಗೆ ೭-೨-೧೯೭೬ಕ್ಕೆ ಐವತ್ತು ತುಂಬಿತು. ಆ ಸಂದರ್ಭ ದಲ್ಲಿ, ಅವರ ಸಾಧನೆ, ಕೃತಿಗಳ ಸಹೃದಯ ಪರಿಶೀಲನ, ಸಾರಸ್ವತ ಲೋಕಕ್ಕೆ ಕೊಡುಗೆ ಇತ್ಯಾದಿಗಳನ್ನು ಪರಿಚಯಿಸುವ 'ಸ್ನೇಹಕಾರ್ತೀಕ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿ ಗೌರವಿಸಲಾಯಿತು. ಇದು ಒಂದು ವರ್ಷ ತಡವಾಗಿ ಅಂದರೆ ೧೯೭೭ರಲ್ಲಿ ಪ್ರಕಟವಾಯಿತು. ಇದರ ಸಂಪಾದಕರಾಗಿ ಎಸ್. ವಿದ್ಯಾಶಂಕರ್, ಆರ್. ರಾಚಪ್ಪ, ಮತ್ತು ಕ.ವೆಂ. ರಾಜಗೋಪಾಲ ಅವರು ಕೆಲಸ ಮಾಡಿದ್ದಾರೆ. 'ಸ್ನೇಹ ಕಾರ್ತೀಕ' ಜಿ.ಎಸ್.ಎಸ್. ಅವರ ಬದುಕು ಮತ್ತು ಬರಹಗಳನ್ನು ಹೇಳುವುದರ ಜೊತೆಗೆ ಸಾಹಿತ್ಯಕ ಮೌಲ್ಯಗಳನ್ನು ಪಡೆದುಕೊಂಡಿದೆ.

# ಕೃತಿಗಳ ವಿಮರ್ಶೆ

## ಕಾವ್ಯ

'ಚೆಲುವು ಒಲವು' ಸಂಕಲನದ ಕೆಲವು ಗೀತೆಗಳಲ್ಲಿ ಚಿಂತನಾಂಶ ಹೆಚ್ಚಾಗಿರುವಂತೆ ಭಾಸವಾಗುತ್ತದೆ. ಕೆಲವು ಕವನಗಳ ಆರಂಭದ ಸಾಲುಗಳಲ್ಲಿರುವ "ಕಾವ್ಯಪಾಕ" ಬರಬರುತ್ತಾ ನೀರಾಗಿ, ಕೆಲವು ಕಡೆ ನೀರಸವೂ ಆಗಿದೆ. ಮುನ್ನುಡಿಕಾರರಾದ ಪು.ತಿ.ನ. ಹೇಳುವಂತೆ "ಕವನಗಳ ಮೂಲದಲ್ಲಿ ರಸಸ್ಥಿತಿಯನ್ನು ರಚಿಸುವ ಸತತ ಪ್ರೇರಣೆ ಇದೆ. ಹರಿವ ಮನವನು ಹಿಡಿದು ಒಂದೆಡೆ ನಿಲ್ಲಿಸಿಕೊಳ್ಳುವ ಗೀತೆಗಳು ಇಲ್ಲಿ ತುಂಬಿವೆ." ಇಲ್ಲಿನ ಪದ್ಯಗಳನ್ನು ಚೆಲುವಿನ (ಪ್ರಕೃತಿ) ಗೀತೆಗಳು ಮತ್ತು ಒಲವಿನ (ಸಂಸಾರಿಕ ) ಗೀತೆಗಳು ಎಂದು ವಿಭಾಗಿಸಬಹುದು.

ಎಸ್.ಎಂ.ವೃಷಬೇಂದ್ರ ಸ್ವಾಮಿ. ಸ್ನೇಹಕಾರ್ತೀಕ ಪು-೨೧೦

'ಚೆಲುವು-ಒಲವು' ಸಂಕಲನದ "ಕನ್ನಂಬಾಡಿ" ಒಂದು ಒಳ್ಳೆಯ ಸಾನೆಟ್. ಮೊದಲ ನಾಲ್ಕು ಸಾಲಿನಲ್ಲಿ ಆವೃತ, ಪ್ರಾಸದ ಚೌಪದಿ, ಅನಂತರ ಐದು ದ್ವಿಪದಿಗಳಿರುವ ಸಾನೆಟ್ಟು ಇದು ಮೋಹಕವಾಗಿದೆ.

ಎಸ್.ಅನಂತನಾರಾಯಣ. 'ಹೊಸಗನ್ನಡ ಕಲಿಕೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ' (೧೯೬೨) ಪು - ೨೧೨

ಸಾಮಗಾನದ ಬೆಡಗು ಬಿನ್ನಾಣಗಳೇ ಈ 'ಚೆಲುವು-ಒಲವು'ನಲ್ಲಿಯೂ ಇವೆ. ಕವಿಗೆ ಸಹಜವಾಗಿರಬೇಕಾದ ವಿಶಿಷ್ಟ ಕಲ್ಪನೆ ಇದೆ. ಸಾಂಪ್ರದಾಯಿಕ ಉಪಮೆಗಳನ್ನು ಬೇರೆ ಬೇರೆ ರೀತಿಯಲ್ಲಿ ಬಳಸಿರುವುದೇ ಹೆಚ್ಚು. ಕೆಲವು ಕಡೆ ಛಂದಸ್ಸು ಮುಗ್ಗರಿಸುತ್ತದೆ. 'ಚೆಲುವು-ಒಲವು' ಕವಿತೆಗಳಲ್ಲಿ 'ಬಾಹ್ಯ ಸೌಂದರ್ಯ ಮತ್ತು ' ಬಗೆಯ ಕಾಂತಿ' ಅಭಿವ್ಯಕ್ತಿ ಪಡೆದಿವೆ.

ಪು.ತಿ.ನ. 'ಸ್ನೇಹ ಕಾರ್ತೀಕ.' ಪು-೩೫೫

ಕವಿ ತಿಳಿಸಿರುವಂತೆ "ಮಾನವ ಮತ್ತು ಆತನ ಅಂತರಂಗ" ಹಾಗೂ "ಮಾನವ ಮತ್ತು ಕಾಲ" ಬದುಕಿನ ಸಮಸ್ಯೆಯ ಈ ಎರಡೂ ಮುಖಗಳ ವಿವೇಚನೆ 'ದೀಪದ ಹೆಜ್ಜೆಯ' ವಸ್ತು.

ಜೆ. ಎಚ್. ನಾಯಕ

ಬೆಳೆಯುತ್ತಿರುವ ಒಂದು ಮನಸ್ಸು ಸಹಜವಾಗಿ, ಅನಿವಾರ್ಯವಾಗಿ, ಭಾವನೆಗಳ ಆಳ ವಿಸ್ತಾರಗಳನ್ನು ಅಭಿವ್ಯಕ್ತಿಯ ರೀತಿ ವೈವಿಧ್ಯವನ್ನು ಹೇಗೆ ಸಾಧಿಸಿಕೊಳ್ಳುತ್ತದೆ ಎನ್ನುವುದಕ್ಕೆ ಅವರ ಕವನಗಳು ಕಾಲಾನುಕ್ರಮದಲ್ಲಿ ಬಿಟ್ಟ ಹೆಜ್ಜೆ ಗುರುತುಗಳು ಒಳ್ಳೆಯ ನಿದರ್ಶನಗಳಾಗಬಲ್ಲವು. ಸಾಂಪ್ರದಾಯಿಕವಾದ ವಿಷಯ ರೀತಿಗಳೆರಡ ರಿಂದಲೂ ಅವರ ಕವಿಹೃದಯ ನಿಧಾನವಾಗಿ ಬೇರೆ ಕಡೆಗಳಿಗೆ ಹಾತೊರೆಯುತ್ತಿ ರುವುದನ್ನು 'ದೇವಶಿಲ್ಪ'ದಲ್ಲಿ ಕಾಣಬಹುದು.

ಪಿ.ಎಂ. ಇನಾಂದಾರ್. 'ಸ್ನೇಹ ಕಾರ್ತೀಕ' ಪು- ೨೭-೨೮

ರಾಮಕೃಷ್ಣ ಪರಮಹಂಸರು ಮತ್ತು ವಿವೇಕಾನಂದರ ಬೆಳಕಿನಲ್ಲಿ ಸಾಗಿದ ಶಿವರುದ್ರಪ್ಪನವರಿಂದ 'ವಚನವೇದ'ದೊಳಗಿನ ಐವತ್ತು ಕವನಗಳ ಸುಂದರವಾದ, ಗೇಯವಾದ ಅನುವಾದವು 'ತೀರ್ಥವಾಣಿ'ಯಾಗಿ ಪ್ರಕಟಣೆಗೊಂಡಿದೆ.

ವಾಮನ ಬೇಂದ್ರೆ. 'ಚೆನ್ನವೀರಕಣವಿ ಹಾಗೂ ಜಿ. ಎಸ್ ಶಿವರುದ್ರಪ್ಪ ಅವರ ಕಾವ್ಯ' (ತೌಲನಿಕ ವಿವೇಚನೆ)

ಮೊದಲ ಮೂರು ಸಂಕಲನಗಳಲ್ಲಿ ಕವಿ, ಆಶಯ ಅಥವಾ ಹೇಳಿಕೆಗಳನ್ನು ಅದನ್ನು ಕವನದ ಭಾಷೆಯೊಳಗಿನಿಂದ ಸಾಧಿಸದೇ ಹೊರಗಿನಿಂದ ತಂದು ಜೋಡಿಸುತ್ತಾನೆ. ಇದರಿಂದ ಭಾಷೆಯ ಉಪಯೋಗ ಸಾಕಷ್ಟು ಆಗುವುದಿಲ್ಲ. ಅಲ್ಲದೆ ವರ್ಣನೆಗಳಲ್ಲಿಯೂ ಪದ, ವಾಕ್ಯಗಳ ಬಳಕೆ ಅತಿಯಾಗುತ್ತದೆ.

'ಸಂಜೆ ದಾರಿ', 'ದೀಪದ ಹೆಜ್ಜೆ', 'ಕಾರ್ತೀಕ' ಸಂಕಲನಗಳಲ್ಲಿ ಹಿಂದಿನಂತೆ ಗೇಯಾಂಶ ವನ್ನು ಗಮನದಲ್ಲಿಟ್ಟು ಕವನದ ಸಾಲುಗಳನ್ನು ವಿಭಜಿಸುವುದು ಅಲ್ಲಿಲ್ಲಿ ನಡೆದರೂ, ಭಾಷೆ, ಆಡುಮಾತಿನ ಸಮೀಪ ಬರುವುದಲ್ಲದೆ ಕವನದ ಅಶಯವನ್ನು ವ್ಯಕ್ತಪಡಿಸಲು ಹೆಚ್ಚು ಸಮರ್ಥವಾಗುತ್ತದೆ. 'ಅನಾವರಣ' ದಲ್ಲಿಯ ಕವನಗಳು ವಿಡಂಬನೆಯ ಗುಣವನ್ನು ಹೊಂದಿದ್ದರಿಂದ ತಟ್ಟನೆ ಮನಸ್ಸನ್ನಾಕರ್ಷಿಸಿದರೂ ಕವನಗಳ ಅರ್ಥ ಭಾಷೆಯ ಮೂಲಕವೇ ಸಿದ್ಧವಾಗುವುದು ಕೆಲವೇ ಕವನಗಳಲ್ಲಿ. 'ಗೋಡೆ'ಯಲ್ಲಿನ ಭಾಷೆ ಮತ್ತೆ ಸಾಮಾರ್ಥ್ಯವನ್ನು ಕಳೆದುಕೊಳ್ಳುತ್ತದೆ. ಜಿ.ಎಸ್.ಎಸ್ ತಮ್ಮ ಮೊದಲಿನ ಕೆಲವು ಕವನಗಳಲ್ಲಿ ತೋರುವ ಯಶಸ್ಸನ್ನು (ಭಾಷೆಯ ದೃಷ್ಟಿಯಿಂದ) ಅನಂತರದ ಕವನಗಳಲ್ಲಿ ತೋರುವುದಿಲ್ಲ.

ಕೃಷ್ಣ ಪರಮೇಶ್ವರ ಭಟ್ಟ 'ಸ್ನೇಹ ಕಾರ್ತೀಕ' ಪು- ೪೨೭

'ಕಾರ್ತೀಕ' ಸಂಕಲನದಲ್ಲಿ, ಕಾವ್ಯ ಸೃಷ್ಟಿಯ ಬಗೆಗೆ ತಳೆದ ನಿಲುಮೆಯೇ ಬೇರೆ ಯಾಗಿದೆ. "ಬದುಕಿನಲ್ಲಿ ದುಃಖ ಹಾಸಲುಂಟು ಹೊದೆಯಲುಂಟು, ಆದ್ದರಿಂದಲೇ ನಲವಿನ ಅಗತ್ಯ ವಿಶೇಷವಾಗಿರುವುದು. ಬದುಕಿಗೆ ಬೇಕಾದ ನಲವನ್ನು, ನಲವಿನ

ಮನಸ್ಥಿತಿಯನ್ನು ಯಾರು ಯಾವ ರೂಪದಲ್ಲಿ ನೀಡಿದರೂ ಸ್ವಾಗತಾರ್ಹವೇ" ಎಂಬುದು ಜಿ.ಎಸ್.ಎಸ್. ಅವರಲ್ಲಿಯ ಧೋರಣೆಯಾಗಿದೆ.

ಜಿ. ಎಸ್. ಕಾಪಸೆ 'ಸ್ನೇಹ ಕಾರ್ತೀಕ' ಪು- ೨೪೩

" ಬದುಕಿನ ದುರಂತ ವಿಕಾರವನ್ನು ಅದರೊಂದಿಗಿನ ಸೋಲಿನ ನೋವನ್ನು ಇವರು (ಜಿ. ಎಸ್.ಎಸ್.) ಒಪ್ಪಿಕೊಂಡರು. ಇವರ ಕಾವ್ಯದ ನಾಯಕ ಸಮಾಜದ ಟೀಕಾಕಾರನಾಗಿ ಸಂಭಾಷಿಸಬಲ್ಲಂತೆ ವಿದೂಷಕನಾಗಿಯೂ ನಗಬಲ್ಲವನಾಗಿದ್ದಾನೆ. ಟೀಕಾಕಾರನಾಗಿ ಸಂಭಾಷಿಸಿದ್ದು ನಿರರ್ಥಕ ನಿಷ್ಪ್ರಯೋಜಕವೆಂಬ ತಿಳುವಳಿಕೆ ಮೂಡಿ ತನ್ನ ಶಬ್ದಶಕ್ತಿಯ ಮಿತಿಯನ್ನು ಕಂಡುಕೊಳ್ಳುತ್ತಾನೆ.ಇದರ ಪರಿಣಾಮವಾಗಿ ವಿದೂಷಕನಾಗುತ್ತಾನೆ. ವಿದೂಷಕನ ನಟನೆಯ ಲಘುತ್ವದ ಅರಿವಾಗಿ ಮತ್ತೆ ನಾಯಕನ ಮೋಜು ಕೊಡಲು ಸುರು ಮಾಡುತ್ತಾನೆ. ಈ ಮಧ್ಯದ ಲಾಳಿ ಎಸೆತ, ಸಂದಿಗ್ದ ಭಯಂಕರ ಸ್ಥಿತಿ ಈ ಕಾವ್ಯ ನಾಯಕನ ದಾರಿ" (ಅನಾವರಣ)

ಡಾ. ಚಂದ್ರಶೇಖರ ಕಂಬಾರ 'ಸ್ನೇಹ ಕಾರ್ತೀಕ' ಪು- ೨೭೬-೨೭೭

ಶಿವರುದ್ರಪ್ಪನವರ ಕಾವ್ಯದ ವ್ಯಾಪ್ತಿ ವಿಶಾಲವಾಗಿದೆ. ಪ್ರಕೃತಿ ಗೀತೆಗಳು, ಚಿಂತನೆ, ಸಾಮಾಜಿಕ ಸಮಸ್ಯೆಗಳು, ವೈಯಕ್ತಿಕ ಜೀವನದ ರಸ ನಿಮಿಷಗಳು, ಹೀಗೆ ಬಾಳಿನ ವಿವಿಧ ಮುಖಗಳ ಅನುಭವಗ್ರಾಹ್ಯ ಹಾಗೂ ಅನುಭವಾತೀತ ಜೀವನದ ದರ್ಶನವನ್ನು ಅವರು ತಮ್ಮ ಕವಿತೆಗಳಲ್ಲಿ ಸೆರೆ ಹಿಡಿಯುತ್ತಾರೆ.

ರಾಘವೇಂದ್ರ ಖಾಸನೀಸ 'ಸ್ನೇಹ ಕಾರ್ತೀಕ' ಪು- ೧೬೨

ಪ್ರಕೃತಿ ಸೌಂದರ್ಯ, ಬಾಲ್ಯದ ನೆನಹುಗಳು, ಮಗುವಿನ ಮುಗ್ದತೆ- ಇವು ಸಮರಸಗೊಂಡು ಜಿ.ಎಸ್.ಎಸ್. ಅವರ, ಸೃಷ್ಟಿಯ ಸೋಜಿಗವನ್ನು ಸೆರೆಹಿಡಿದು ನಮ್ಮ ವಿಸ್ಮಯಾನಂದವನ್ನು ಹೆಚ್ಚಿಸುತ್ತದೆ.

ಚೆನ್ನವೀರ ಕಣವಿ ' ಸ್ನೇಹ ಕಾರ್ತೀಕ ' ಪು- ೧೨೬

ಕಾರಂತರ ಬಾಲ ಪ್ರಪಂಚ, ಗೋವಿನ ಕಥೆ, ಕುವೆಂಪು ಅವರ ರಕ್ತಾಕ್ಷಿ, ಡಿವಿಜಿಯವರ ಮಂಕುತಿಮ್ಮನ ಕಗ್ಗ ಇವುಗಳ ಜೊತೆಗೆ ವರ್ಡ್ಸ್‌ವರ್ತ್, ಎಲಿಯಟ್, ಲಾರೆನ್ಸ್ ಅವರ ಕಾದಂಬರಿಗಳು ಶಿವರುದ್ರಪ್ಪನವರ ಮೇಲೆಪ್ರಭಾವ ಬೀರಿವೆ.

ವಾಮನ ಬೇಂದ್ರೆ. 'ಚೆನ್ನವೀರಕಣವಿ ಹಾಗೂ ಜಿ.ಎಸ್. ಶಿವರುದ್ರಪ್ಪ ಅವರ ಕಾವ್ಯ'

(ತೌಲನಿಕ ವಿವೇಚನೆ) ಪು. ೫೨

ಜಿ. ಎಸ್.ಎಸ್. ರವರ ಮೊದಲಿನ ಕಾವ್ಯ ('ದೀಪದ ಹೆಜ್ಜೆ' ಸಂಕಲನದ ತನಕ) ವಿಸ್ಮಯ ಮೂಲವಾದದ್ದು, " ಸುಂದರವಾದ ಬಹಿರಂಗ ಲೋಕದಲ್ಲಿ ಬೆರಗುಗಣ್ಣುಗಳಲ್ಲಿ ಉತ್ಸಾಹದಿಂದ ವಿಹಾರಗೈದ " ಚೇತನ ಕಾವ್ಯ ಅದು. ಸೌಂದರ್ಯೋಪಾಸಕನೊಬ್ಬನ ಹಾಡುಗಳು ಅವು ನೋಡುವ ಕಣ್ಣು ಇಲ್ಲಿ ಮುಖ್ಯವಾದದ್ದು .... ಶಿವ ಮತ್ತು

ಸುಂದರ ಪ್ರಧಾನವಾದ ಕಾವ್ಯ ಅದು, ಕುವೆಂಪು ಮತ್ತು ಪುತಿನ ಅವರ ಅಂಶಗಳನ್ನು ಬೆರಸಿಕೊಂಡ ವ್ಯಕ್ತಿಯೊಬ್ಬ ಅದರ ಹಿಂದೆ ಇಲ್ಲಿ ಕಾಣುತ್ತಾನೆ............

ಜಿ. ಎಸ್.ಎಸ್. ಅವರ ಗಾಢವಾದ ಕಾಳಜಿಗಳು ನಿಜವಾದ ಹುಡುಕಾಟದ ಕಾವ್ಯ ಸೃಷ್ಠಿ ಪ್ರಕಟವಾದದ್ದು 'ದೀಪದ ಹೆಜ್ಜೆ' ಸಂಕಲನದಿಂದ. ಜಿ.ಎಸ್.ಎಸ್. ರವರ ಕಾವ್ಯ ಜೀವನದ ಎರಡನೆಯ ಘಟ್ಟವನ್ನಾಗಿ 'ದೀಪದ ಹೆಜ್ಜೆ' ಯಿಂದ 'ಗೋಡೆ' ಯ ತನಕ ಗುರುತಿಸಬಹುದು. ಅನೇಕ ವಿಮರ್ಶಕರು ನವ್ಯ ಎಂದು ಕರೆಯುವ ಜಿ.ಎಸ್. ಎಸ್. ರವರ ಪ್ರಾತಿನಿಧಿಕ ಕವನಗಳು ಇರುವುದು ಇಲ್ಲಿಯೆ.........

ಕವಿಯ ತಾತ್ವಿಕ ದೃಷ್ಟಿಕೋನದಲ್ಲಿ ಮಹತ್ವದ ತಿರುವೊಂದನ್ನು ಇಲ್ಲಿ ಕಾಣಬಹುದು. ಏಕೆಂದರೆ, ಕಾವ್ಯ ಸೃಷ್ಠಿಯ ಮೂಲಭಿತ್ತಿಯಾದ ಬದುಕಿನ ವಿರೋಧಾ ಭಾಸಗಳ ವೈಷಮ್ಯಗಳ ಗ್ರಹಿಕೆ ಆರಂಭವಾಗಿದೆ. ಬದುಕಿನ ಅರ್ಥವಂತಿಕೆಯನ್ನು ಕಂಡುಕೊಳ್ಳುವ ವ್ಯಕ್ತಿಯೊಬ್ಬನ ನೈತಿಕ ಜವಾಬ್ದಾರಿಯೆಂಬ ಅರಿವು ಹುಟ್ಟಿದೆ. ....ಕವಿಯ ಮಾತಿನಲ್ಲಿಯೇ ಹೇಳುವುದಾದರೆ' "ಒಂದು ಮಾನವ ಮತ್ತು ಅಂತರಂಗ" ಮತ್ತೊಂದು "ಮಾನವ ಮತ್ತು ಕಾಲ" ಈ ಎರಡು ಸಮಸ್ಯೆಗಳ ಗಂಭೀರ ಚಿಂತನೆಯೇ ಇಲ್ಲಿಯ ಸ್ಥಾಯಿ..............

ಜೀವನದಲ್ಲಿನ ವೈಷಮ್ಯಗಳನ್ನು ದಾಟಿ ಬೆಳಕನ್ನು ಸಾಧಿಸಬಹುದೆಂಬ ನಿಲುವು ಇಲ್ಲಿಯ ಪ್ರಮುಖ ಅಶಯ.............

ಬಾಳಬೀದಿಯ ಬೆಳ್ಗೊಳದ ಬೆಟ್ಟದಲ್ಲಿ ಗೊಮ್ಮಟನ ಕಂಡ ಆದರ್ಶದ ಮೇಲಿನ ನಂಬಿಕೆ, ಅದನ್ನು ಸಾಧಿಸಲಾಗದ ಅಸಹಾಯಕತೆ, ಅಸಮಗ್ರ ಹೋರಾಟ, ಇಲ್ಲಿಯ ಕವನಗಳಲ್ಲಿ ಹರಿಯುವ ಮುಖ್ಯ ಶಕ್ತಿ.

ಡಿ.ಆರ್. ನಾಗರಾಜ್ 'ಸ್ನೇಹ ಕಾರ್ತೀಕ' ಪು. ೪೨೮-೪೩೧

ಜಿ.ಎಸ್. ಶಿವರುದ್ರಪ್ಪನವರ ಕಾವ್ಯ ಹಾಗೂ ಸಾಹಿತ್ಯದ ಮೇಲೆ ಸಂಪ್ರದಾಯವು ಬೀರಿರುವ ಪ್ರಭಾವವು ಪರೋಕ್ಷವಾದದು. ಅವರ ವ್ಯಕ್ತಿತ್ವ ಮೇಲೆ ಪ್ರಭಾವವು ಕಾವ್ಯದಲ್ಲಿ ಪ್ರತಿ ಫಲಿತವಾಗಿದೆ; ಅಷ್ಟೆ, ಅವರ ಬಾಲ್ಯ ಮತ್ತು ಹರೆಯದಲ್ಲಿ ನಮ್ಮ ದೇಶದ ಇತಿಹಾಸದಲ್ಲಿ ನಡೆಯುತ್ತಿದ್ದ ಅತ್ಯಂತ ಮಹತ್ವದ ಘಟನೆಗಳು, ಅವರ ಮೇಲೆ ಬೀರಿರುವಷ್ಟು ಪ್ರಭಾವನ್ನು ಹಿಂದಿನ ಸಂಪ್ರದಾಯ ಬೀರಿಲ್ಲ. ಬುದ್ದಿ ಪೂರ್ವಕವಾದ ಪರಿಶೀಲನೆಗಿಂತ ಹೆಚ್ಚಾಗಿ, ಅವರ ವೈಯಕ್ತಿಕ ಜೀವನ ಹಿಡಿದ ದಿಕ್ಕು ದೆಸೆಗಳು, ಜಿ.ಎಸ್.ಎಸ್ ಅವರ ಕಾವ್ಯ ಅಭ್ಯಾಸದಲ್ಲಿ ಹೆಚ್ಚು ಮಹತ್ವವಾದವು. ಕಾವ್ಯ ರಚನಾ ಶಿಲ್ಪದ ದೃಷ್ಟಿಯಿಂದ ಸಂಪ್ರದಾಯವು ಅವರ ಮೇಲೆ ಬೀರಿರುವ ಪ್ರಭಾವವು ಸೀಮಿತ. ಈ ಕವಿಯ ಕಾವ್ಯ ಮತ್ತು ಇತರ ಸಾಹಿತ್ಯ ಕೃತಿಗಳ ಇನ್ನೂ ವಿವರವಾದ ಅಧ್ಯಯನವು, ಸಂಪ್ರದಾಯ ಮತ್ತು ವ್ಯಕ್ತಿಯ ನಡುವಿನ ಸಂಬಂಧದ ಸೂಕ್ಷ್ಮಗಳ ಮೇಲೆ ಇನ್ನೂ ಸ್ಪಷ್ಟವಾದ ಬೆಳಕನ್ನು ಚೆಲ್ಲಬಹುದು.

ಡಾ. ಎಚ್.ಎಸ್. ರಾಘವೇಂದ್ರರಾವ್ 'ಸ್ನೇಹ ಕಾರ್ತೀಕ' ಪು -೩೬೯

ವಿಷ ಮಂಡಲಗಳಿಂದ ಪಾರಾಗುವ ಹಂಬಲವೇ ಜಿ.ಎಸ್.ಎಸ್ ಅವರ ಕಾವ್ಯದ ವಿಡಂಬನೆಯ ಚೈತನ್ಯ. ಕಾವ್ಯ ಜೀವನದ ಮುಗ್ಧೋದ್ರೇತ್ಸಾಹವನ್ನು ಉಳಿಸಿಕೊಳ್ಳುವುದು ಸಾಧ್ಯವಿಲ್ಲವಾದರೂ ಸಾತ್ವಿಕ ಶಕ್ತಿಯನ್ನಾದರೂ ಉಳಿಸಿಕೊಳ್ಳುವುದೇ ಆ ವಿಡಂಬನೆಯ ಪ್ರಮುಖ ಪರಿಣಾಮಗಳಲ್ಲೊಂದು. ಸುತ್ತಲ ಪರಿಸರದ ವಸ್ತುಗಳ ಬಗ್ಗೆ ವಿಡಂಬಿಸುವಾಗ ಕವಿ ಒಮ್ಮೊಮ್ಮೆ ಟೀಕಾಕಾರನಂತೆ ಕಾಣುತ್ತಾರೆ. ಆಗ ಬಳಸುವ ರೂಪಕಗಳು, ಪ್ರತಿಮೆಗಳು ವಿಷಾದದ ಆಳದಿಂದ ಬಂದುದಲ್ಲ. ಆದರೆ ಆ ವಿಡಂಬನೆಯ ಹಿಂದೆ ಹರಿಯುತ್ತಿರುವುದು ಶುದ್ಧ ಮಾನವೀಯ ನೆಲೆ.

ಕಾಳೇಗೌಡ ನಾಗವಾರ 'ಸ್ನೇಹ ಕಾರ್ತೀಕ ' ಪು- ೪೧೩

ಜಿ.ಎಸ್.ಎಸ್.ಮನೋಧರ್ಮಕ್ಕೆ ಸಂಸಾರಿಕ ಲೌಕಿಕವು ಹೊಂದಿಕೊಳ್ಳುವುದರಿಂದಲೇ ಅವರ ಕಾವ್ಯ ನೆಲೆ ಚಿಗುರುತ್ತದೆ. ಇವರು ಬಳಸುವ ರೂಪಕಗಳು ಸುಂದರವಾಗಿ ಭಾವಗೀತಾತ್ಮಕವಾಗಿರುತ್ತವೆ.

ಕಂ. ವೆಂ. ರಾಜಗೋಪಾಲ 'ಸ್ನೇಹ ಕಾರ್ತೀಕ' ಪು - ೧೫೫

ಜಿ.ಎಸ್.ಎಸ್. ಕವನಗಳಲ್ಲಿ ಎದ್ದು ಕಾಣುವುದು ಪ್ರಸಾದ ಗುಣ. ಕವಿ ಕಾವ್ಯ ಶರೀರವನ್ನು, ಪದ ಸಂಯೋಜನೆಯನ್ನು ಬಳಸುವುದು; ಅರ್ಥವನ್ನು ಓದುಗನಿಗೆ ಸಂಹನಗೊಳಿಸುವುದು ಮತ್ತು ಪಾರದರ್ಶಕ ಮಾಧ್ಯಮವನ್ನಾಗಿ ಏರ್ಪಡಿಸುವುದರಲ್ಲಿ ಯಶಸ್ವಿ ಎಂಬುದು ಸ್ಪಷ್ಟ. ಕವಿ, ತನ್ನ ಅನುಭವಜನ್ಯ ಭಾವ ಇಲ್ಲವೆ ಅರ್ಥಗಳನ್ನು ಭಾಷಿಕವಾಗಿ ನಿರೂಪಿಸುತ್ತಾರೆ. ಆ ಮೂಲಕ ಅನುಭವದ ಗ್ರಹಿಕೆಯನ್ನು ಕವಿತೆಯ ರಚನೆಯ ಮೂಲಕ ದಾಖಲಿಸಿ ಬಿಡುಗಡೆ ಮಾಡುತ್ತಾರೆ.

ಶಿವರುದ್ರಪ್ಪನವರ ಕಾವ್ಯದಲ್ಲಿ ಜೀವನ ಸಮೃದ್ಧ ಪ್ರಕೃತಿ ಮತ್ತು ಮಾನವ ಕೇಂದ್ರಿತ ಸಮಾಜದ ಚಿತ್ರಣವನ್ನು ಕಾಣುತ್ತೇವೆ. ಮಾನವ ಕೇಂದ್ರಿತ ಸಮಾಜದಲ್ಲಿ ಕವಿ ಸಮರಸವಿಲ್ಲದ ಜೀವನವನ್ನು ಕಾಣುತ್ತಾನೆ. ಪ್ರಕೃತಿ ಕೇಂದ್ರಿತ ಕವಿತೆಗಳಲ್ಲಿರುವ ವಿಸ್ಮಯ, ಉತ್ಸುಕತೆಗಳ ಬದಲಾಗಿ ಖಿನ್ನತೆ, ಸಾತ್ವಿಕ ಕ್ರೋಧ, ಹತಾಶೆಯ ಅಂಚಿನಲ್ಲಿ ಸುಳಿಯುವ ಅಸಹಾಯಕತೆ; ಅನಿಸಿದ್ದನ್ನು ಹಿಂಜರಿಯದೆ ಪ್ರತಿಪಾದಿಸುವ ಧೈರ್ಯ ಇದೆ. ಇವರದು ಮುಖ್ಯವಾಗಿ ನಂಬುಗೆಯ ಹಾದಿ.

ಡಾ. ಕೆ. ವಿ. ನಾರಾಯಣ 'ಸಮಗ್ರ ಕಾವ್ಯದ ಮುನ್ನುಡಿಯಲ್ಲಿ'

ಶಿವರುದ್ರಪ್ಪನವರ ಕಾವ್ಯಬದುಕನ್ನು ಮೂರು ಘಟ್ಟಗಳಲ್ಲಿ ವಿಂಗಡಿಸಬಹುದು. ೧) ಸೌಂದರ್ಯಾತ್ಮಕ ಘಟ್ಟ ೨) ಮೆಟಫಿಸಿಕಲ್ ಘಟ್ಟ ೩) ರುದ್ರ ತಿಳವಿನ ಘಟ್ಟ. ಮೊದಲ ಘಟ್ಟದಲ್ಲಿ "ಸಾತ್ವಿಕ ಹುಚ್ಚುತನ" ಎರಡನೇ ಘಟ್ಟದಲ್ಲಿ ' "ಧೀರೋದಾತ್ತ ಆಶಾವಾದ," ಮೂರನೇ ಘಟ್ಟದಲ್ಲಿ "ವಿಷಮ ವಾತಾವರಣದ ಟ್ರ್ಯಾಜಿಕ್" ಮುಖ್ಯ ಗುಣಗಳಾಗಿವೆ.

ಮೆಟಫಿಸಿಕಲ್ ಕಾವ್ಯದಲ್ಲಿ 'ದೀಪದ ಹೆಜ್ಜೆ'ಯಿಂದ 'ತೆರೆದ ದಾರಿ' ತನಕದ ಕವನಗಳು ಸೇರುತ್ತವೆ. ರುದ್ರುತಿಳಿವಿನ ಘಟ್ಟಕ್ಕೆ 'ಗೋಡೆ' ಸಂಕಲನದ ಕವನಗಳು ಸೇರುತ್ತವೆ.

ಡಾ. ಡಿ.ಆರ್. ನಾಗರಾಜ್ 'ಅಮೃತ ಮತ್ತು ಗರುಡ' ಪು-೧೦೭-೧೧೩

ಶಿವರುದ್ರಪ್ಪನವರ ಕಾವ್ಯ ಮುಖ್ಯವಾಗಿ ಆವರಣ- ವ್ಯಕ್ತಿತ್ವಗಳ ಬಾಂಧವ್ಯವನ್ನು ಕುರಿತ ಕಾವ್ಯ. ಈ ಬಾಂಧವ್ಯವನ್ನು ಅರ್ಥವತ್ತಾಗಿ ಸಾಧಿಸುವ ಪ್ರಯತ್ನದ ಕಾವ್ಯ.

ಎಲ್.ಎಸ್. ಶೇಷಗಿರಿರಾವ್ 'ಸ್ನೇಹ ಕಾರ್ತೀಕ' ಪು-೧೩೮

ನವೋದಯ, ನವ್ಯ, ನವ್ಯೋತ್ತರ ಹೀಗೆ ಮೂರು ಕಾವ್ಯ ಮಾರ್ಗಗಳು ಇಲ್ಲಿ ತಮ್ಮ ಅಸ್ತಿತ್ವನ್ನು ಸಾರಿವೆ. ಆದರೆ ಇವೆಲ್ಲವುಗಳ ಹಿಂದೆ ಬದಲಾವಣೆಗಳಿಂದಾಗಿ ಕರಗಿ ಹೋಗದ ಕೊಚ್ಚಿಹೋಗದ ಸ್ವೋಪಜ್ಞ ವ್ಯಕ್ತಿತ್ವವೊಂದು ಕಾಣುತ್ತದೆ.

ಶಿವರುದ್ರಪ್ಪನವರದು ಪ್ರಸನ್ನ ಕಾವ್ಯ.

ಅವರ ಕಾವ್ಯವನ್ನು ಚಾರಿತ್ರ್ಯದ ಅಭಿವ್ಯಕ್ತಿ ಎಂದು ಕರೆಯಬಹುದು. ಈ ಸಮಗ್ರ ಕಾವ್ಯದ ಉದ್ದಕ್ಕೂ ಅನೇಕ ಪುನರ್‌ಜನ್ಮಗಳಾಗಿವೆ. ಹೀಗೆ ಪುನರ್‌ಜನ್ಮಗಳನ್ನು ಪಡೆಯಬಲ್ಲ ಶಕ್ತಿ, ಪ್ರತಿಭಾವಂತ ಕವಿಗಳಿಗೆ ಮಾತ್ರ ಸಾಧ್ಯ, ಇದಕ್ಕೆ ಜಿ.ಎಸ್.ಎಸ್ ಕಾವ್ಯವು ಸಾಕಷ್ಟು ಸಮರ್ಥನೆಗಳನ್ನು ಒದಗಿಸಿ ಕೊಡುತ್ತದೆ.

ಡಾ. ಡಿ.ಆರ್. ನಾಗರಾಜ 'ಚೆನ್ನವೀರ ಕಣವಿ ಹಾಗೂ ಜಿ.ಎಸ್.ಎಸ್. ಅವರ ಕಾವ್ಯ' (ತೌಲನಿಕ ವಿವೇಚನೆ) ಪು -೬೯

ಶಿವರುದ್ರಪ್ಪನವರು ಅಡಿಗರ ನಂತರದ ತಲೆಮಾರಿನಲ್ಲಿ ತಮ್ಮ ವಿಶಿಷ್ಟ ಧ್ವನಿಯಿಂದ ಅತಿರೇಕವಲ್ಲದ ವೈವಿಧ್ಯಮಯವಾದ ಕಾಳಜಿಗಳಿಂದ ತುಂಬಾ ಮಹತ್ವದ ಕವಿಯಾಗಿದ್ದಾರೆ.

ಡಾ. ಚಂದ್ರಶೇಖರ ಕಂಬಾರ 'ಸ್ನೇಹ ಕಾರ್ತೀಕ' ಪುಟ-೨೬೦

ಶಿವರುದ್ರಪ್ಪನವರ ಪ್ರಥಮ ಕಾವ್ಯಸ್ಫೂರ್ತಿ ಈಶ್ವರ ಸೃಷ್ಟಿಯ ಸೌಂದರ್ಯದಿಂದ ಮುಗ್ಧವಾದ ತರುಣ ಚೇತನವೊಂದರ ಆನಂದ ಆಶ್ಚರ್ಯಗಳಲ್ಲಿದೆ.

ರಂ. ಶ್ರೀ. ಮುಗಳಿ 'ಸ್ನೇಹ ಕಾರ್ತೀಕ' ಪು- ೧೧೫

"ಮಬ್ಬಿನಿಂದ ಮಬ್ಬಿಗೆ" ಕವಿ ಶಿವರುದ್ರಪ್ಪನವರ ಇದುವರೆಗಿನ (೧೯೬೪) ಕಾವ್ಯಪ್ರಯೋಗ ಮತ್ತು ಸಿದ್ಧಿಯ ಪ್ರಾತಿನಿಧಿಕ ಕವನವೆಂದು ನನ್ನ ಅಭಿಮತ. ಇಲ್ಲಿ ಅನುಭವದ ಸಾಂದ್ರತೆ, ಪ್ರತಿಮೆಗಳು ಬೆಳೆದು ಬಂದಿರುವ ಬಗೆ ಇತ್ಯಾದಿ ಅಂಶಗಳನ್ನು ಪ್ರತ್ಯೇಕವಾಗಿ ವಿವೇಚಿಸಿಲ್ಲ.

ಜಿ.ಎಚ್. ನಾಯಕ 'ಸ್ನೇಹ ಕಾರ್ತೀಕ' ಪು-೪೫೫

**ಕಾವ್ಯ ಮೀಮಾಂಸೆ**

ಶಿವರುದ್ರಪ್ಪನವರ ಡಾಕ್ಟರೇಟ್ ಪ್ರಬಂಧವಾದ 'ಸೌಂದರ್ಯ ಸಮೀಕ್ಷೆ' ಅವರ ವಿದ್ವತ್ತಿಗೂ ತೀಕ್ಷ್ಣವಾದ ವಿಮರ್ಶನ ಶಕ್ತಿಗೂ ಸಾಕ್ಷಿಯಾಗಿದೆ.

**ಕುವೆಂಪು**

'ಸೌಂದರ್ಯ ಸಮೀಕ್ಷೆ' ಬೆನ್ನುಡಿಯಲ್ಲಿ, ಈ ವಿಷಯ, ಈ ವಿಭಾಗ, ಈ ವಿವೇಚನೆ ಕನ್ನಡ ವಿಮರ್ಶಾ ಸಾಹಿತ್ಯದಲ್ಲಿಯೇ ಹೊಸದು. ಲೇಖಕರು ಜಾತಿವಂತ ಕವಿಗಳು, ಅದರಲ್ಲಿಯೂ ಸಹೃದಯತೆಯನ್ನು ಕಳೆದುಕೊಂಡವರಲ್ಲ. ಹೀಗಾಗಿ ಈ ಕವಿಯ ಮನದ ನೆಲೆಯಲ್ಲಿ ಸೌಂದರ್ಯ ಚಿಂತನೆಯಿಂದ ಯಾವ ಬೋಧದ ವಿವರವು ರೂಪುಗೊಂಡಿದೆ ಎಂಬುದನ್ನು ಈ ಪ್ರಬಂಧದಲ್ಲಿ ನೋಡಬಹುದು.

**ದ. ರಾ ಬೇಂದ್ರೆ**

ಸೌಂದರ್ಯದ ಪ್ರಕಾರಗಳನ್ನು, ಸಂಸ್ಕಾರಗಳನ್ನು ಇಷ್ಟು ಸಮಗ್ರವಾಗಿ ವಿಶ್ಲೇಷಿಸುವ ಗ್ರಂಥ ಕನ್ನಡದಲ್ಲಿ ಇದೊಂದೆ. ಚೆಲುವು, ಅದರ ಬಗ್ಗೆ ಕವಿಯ ಒಲವು, ರಸಿಕನ ನಿಲುವು ಮೂರನ್ನು ಮನವರಿಕೆಯಾಗುವಂತೆ ಅನೇಕ ಉದಾಹರಣೆಗಳಿಂದ ವಿವರಿಸಿರುವುದು ಇಲ್ಲಿಯ ವೈಶಿಷ್ಟ್ಯ. (ಸೌಂದರ್ಯ ಸಮೀಕ್ಷೆ)

**ಡಾ. ಕೆ. ಕೃಷ್ಣಮೂರ್ತಿ**

ಐರೋಪ್ಯ ಸೌಂದರ್ಯ ಮಿಮಾಂಸೆಯನ್ನು ನೀವು ತತ್ವಶಾಸ್ತ್ರದ ವಿದ್ಯಾರ್ಥಿಯಂತೆ ಖಚಿತವಾಗಿ ಅರ್ಥಮಾಡಿಕೊಂಡು ಬರೆದಿದ್ದೀರಿ. ಅಲ್ಲಲ್ಲಿ ಬರುವ ನಿಮ್ಮ ಟೀಕೆ, ವಿಮರ್ಶೆಗಳು ನ್ಯಾಯವಾಗಿವೆ.

**ಎಸ್.ಎಲ್. ಭೈರಪ್ಪ**

ಕೇವಲ ಶುಷ್ಕ ಪಂಡಿತರ ಸ್ವತ್ತೆನಿಸುತ್ತಿದ್ದ ಸಂಶೋಧನೆ ರಸದೃಷ್ಟಿಗೂ ಸಹೃದಯ ಸೃಷ್ಟಿಗೂ ಶತ್ರುವಲ್ಲವೆಂಬುದನ್ನು ಎತ್ತಿ ತೋರಿಸಲೋ ಎಂಬಂತೆ ರೂಪುಗೊಂಡಿದೆ 'ಸೌಂದರ್ಯ ಸಮೀಕ್ಷೆ'.

**ಕೆ. ಕೃಷ್ಣಮೂರ್ತಿ 'ಸ್ನೇಹ ಕಾರ್ತೀಕ' ಪು-೨೮೪**

'ಮಹಾಕಾವ್ಯ ಸಮೀಕ್ಷೆ'ಯಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಮಹಾಕಾವ್ಯ ಸಂಬಂಧ ತತ್ವಗಳನ್ನು ತೌಲನಿಕವಾಗಿ ವಿವೇಚಿಸಲಾಗಿದೆ. ಜಿ.ಎಸ್.ಎಸ್ ಅವರು ಇಂಥ ತೌಲನಿಕ ಅಧ್ಯಯನವನ್ನು ಸಾಹಿತ್ಯ ತತ್ವಗಳ, ತಾತ್ವಿಕ, ಪರಿಕಲ್ಪನೆಗಳ ನೆಲೆಯಲ್ಲಿ ಬಳಸಿ ಬರೆದ ಲೇಖನಗಳ ಸಂಕಲನ 'ಕಾವ್ಯಾರ್ಥ ಚಿಂತನ.' ಕವಿಯ ಸೃಜನ ಶೀಲತೆ, ಕಾವ್ಯಕ್ರಿಯೆ, ಓದುಗನ ಅನುಭವ, ಕವಿತೆಯ ಭಾಷೆ. ಕಾವ್ಯ ಪರಿಕರಗಳು ಇವೇ ಮುಂತಾದ ಕ್ಷೇತ್ರಗಳಲ್ಲಿ ಭಾರತೀಯ ಹಾಗೂ ಪಾಶ್ಚಾತ್ಯ ಸಾಹಿತ್ಯ ಮಿಮಾಂಸೆಗಳು

ಬಳಸುವ ಹಲವು ಪರಿಕಲ್ಪನೆಗಳನ್ನು ಜೊತೆಗಿರಿಸಿ ವ್ಯವಸ್ಥಿತವಾದ ಅಧ್ಯಯನವನ್ನು ಮಾಡಿದ್ದಾರೆ. ವ್ಯಾಖ್ಯಾನದ ಜೊತೆಗೆ, ವಿವರ ಸಂಯೋಜನೆಯ ಜೊತೆಗೆ ಕವಿಯ ದೃಷ್ಟಿಯಿಂದಾಗಿ ಒದಗುವ ಸೂಕ್ಷ್ಮವಾದ ಕೆಲವು ಒಳನೋಟಗಳನ್ನು ಆ ಲೇಖನಗಳಲ್ಲಿ ಮಂಡಿಸುತ್ತಾರೆ. ಈ ಲೇಖನಗಳ ಮಹತ್ವ ಹೆಚ್ಚುವುದು ಈ ಒಳನೋಟಗಳಿಂದ. ಏಕೆಂದರೆ, ಅವುಗಳನ್ನು ಕುರಿತು ಇನ್ನೂ ನಡೆಯಬೇಕಾದ ಚರ್ಚೆಯೇ ಈ ಅಧ್ಯಯನ ಕ್ಷೇತ್ರದ ಮುಂದಿನ ಹಂತವಾಗಿದೆ. ಹೀಗಾಗಿ 'ಕಾವ್ಯಾರ್ಥ ಚಿಂತನ' ಒಂದು ಮಹತ್ವದ ಕೃತಿಯಾಗಿದೆ.

**ಡಾ. ಕೆ. ವಿ. ನಾರಾಯಣ 'ಸಾಲು ದೀಪಗಳು' ಪು- ೩೦೬.**

'ತಪೋನಂದನ' 'ದ್ರೌಪದಿಯ ಶ್ರೀಮುಡಿ', 'ರಸೋವೈಸಃ' ಗ್ರಂಥಗಳ ಮೂಲಕ ಪ್ರಾರಂಭವಾದ ಈ ತೌಲನಿಕ ಅಧ್ಯಯನ 'ಕಾವ್ಯಾರ್ಥ ಚಿಂತನದಲ್ಲಿ' ಅತ್ಯಂತ ಸಮರ್ಥವಾಗಿಯೂ, ವ್ಯಾಪಕವಾಗಿಯೂ, ತಲಸ್ಪರ್ಶಿಯಾಗಿಯೂ, ಮುಂದುವರೆದಿರುವುದು ಅಭಿಮಾನದ ಸಂಗತಿಯಾಗಿದೆ. ತೀಕ್ಷ್ಣ ವಿಮರ್ಶನ ನೈಪುಣ್ಯ, ಸೂಕ್ಷ್ಮ ಸಂವೇದನಾ ಸಾಮರ್ಥ್ಯ, ಗಾಢ ವಿದ್ವತ್ತು, ಚಿಂತನ- ಮಂಥನಗಳಿಂದ ಸಂಲಬ್ಧವಾದ ಸಂಸ್ಕಾರ ಮತ್ತು ತೌಲನಿಕ ವಿಶ್ಲೇಷಣಾ ಕೌಶಲ್ಯಗಳು ಈ ಕೃತಿಯಲ್ಲಿ ಪ್ರತಿಫಲನಗೊಂಡು, ಅದೊಂದು ಮಾರ್ಗದರ್ಶಕ ಆಧಾರಭೂತ ಕೃತಿ ಎನ್ನುವ ಮೆಚ್ಚುಗೆಗೆ ಪಾತ್ರವಾಗಿದೆ.

**ಕುವೆಂಪು**

ಒಂದು ಸಲ ಹಿಡಿದರೆ ಕೆಳಗಿರಿಸಲಾರದಂಥ ಒಳ್ಳೆಯ ಶೈಲಿಯಲ್ಲಿ ಸಾಂದ್ರ ಆಲೋಚನೆಯ ಉದ್‌ಗ್ರಂಥ (ಕಾವ್ಯಾರ್ಥ ಚಿಂತನ).

**ಪು.ತಿ.ನ.**

'ಕಾವ್ಯಾರ್ಥ ಚಿಂತನ'ದ ರಚನೆಯ ಹಿಂದೆ ಇರುವ ಸಂಸ್ಕೃತ, ಇಂಗ್ಲಿಷ್ ಆಧಾರ ಗ್ರಂಥಗಳ ಆಳವಾದ ಅಭ್ಯಾಸ, ಮನನ, ವಿವೇಚನೆ, ಪಾಶ್ಚಾತ್ಯ ಭಾರತೀಯ ಕಾವ್ಯ ಪರಿಕಲ್ಪನೆಗಳ ನಿರ್ದಿಷ್ಟವಾದ ಗ್ರಹಿಕೆ, ನಿರ್ದುಷ್ಟವಾದ ನಿರೂಪಣೆ-ಇವು ನಿಜವಾಗಿಯೂ ದಂಗು ಬಡಿಸುವಂಥವು.

**ಎಂ. ಗೋಪಾಲಕೃಷ್ಣ ಅಡಿಗ**

'ಕಾವ್ಯಾರ್ಥ ಚಿಂತನ' ಈಚಿನ ದಿನಮಾನದಲ್ಲಿ ಕನ್ನಡ ಸಾಹಿತ್ಯ ಶಾಸ್ತ್ರದ ತೌಲನಿಕ ಅಧ್ಯಯನದ ಶಾಖೆಗೆ ಒಂದು ಮಹತ್ತರವಾದ ಕೊಡುಗೆ. ಹೊಸ, ಹಳೆಯ ವಿಚಾರಧಾರೆಗಳನ್ನು ಹೋಲಿಸುವ ಮುನ್ನ ಎರಡನ್ನೂ ಇಂದಿನ ಪರಿಸರದ ಪ್ರಜ್ಞೆಗೆ ಅನುಗುಣವಾಗಿ ಅರ್ಥೈಸುವ ಸ್ವೋಪಜ್ಞತೆ ಇದೆ. ಹಾಗೆ ಮಾಡುವಾಗ ಮೂಲ ಪರಿಕಲ್ಪನೆಗಳು ವಿಪರ್ಯಾಸವಾಗದಂತೆ ನೋಡಿಕೊಳ್ಳಲು ಮರೆತಿಲ್ಲ......ಕವಿ ಪ್ರತಿಭೆ, ವಿಮರ್ಶನ

ಪ್ರಜ್ಞೆ, ಚಿಂತನಸ್ಫೂರ್ತಿ ಈ ಮೂರು ಮೇಳೈಸಿ ಇಂದು ಬರೆಯಬಲ್ಲವರು ನಮ್ಮಲ್ಲಿ ಬಹಳ ಜನರಿಲ್ಲ.

ಡಾ. ಕೆ. ಕೃಷ್ಣಮೂರ್ತಿ

ವಿಮರ್ಶೆ ತನ್ನ ಶಾಸ್ತ್ರೀಯ ಶಿಸ್ತಿನಿಂದ ಇಷ್ಟೊಂದು ಆಹ್ಲಾದಕರವೂ, ಆಕರ್ಷಕವೂ, ಆಗಿರುವುದು ಸಾಧ್ಯವೇ ಎಂದು ಅಚ್ಚರಿ ಪಡುವಂತಿದೆ. ಒಬ್ಬನೇ ವ್ಯಕ್ತಿಯಲ್ಲಿ ಶ್ರೇಷ್ಠ ಬಗೆಯ ಕವಿ ಹಾಗೂ ವಿಮರ್ಶಕರಿಬ್ಬರೂ ಪರಸ್ಪರ ಮುಕ್ತ ಮನಸ್ಸಿನಿಂದ ತಮ್ಮ ರಹಸ್ಯಗಳನ್ನು ನಿವೇದಿಸಿಕೊಳ್ಳುತ್ತ ಪಾಲುಗೊಂಡಂತಿದೆ 'ಕಾವ್ಯಾರ್ಥ ಚಿಂತನ'.

ಚೆನ್ನವೀರ ಕಣವಿ.

ಅವರ ಬರವಣಿಗೆಯಲ್ಲಿ ಶಾಸ್ತ್ರ ಭಾಷೆಯ ಜಿಗುಟುತನವಾಗಲಿ ಜಟಿಲ ವಾಕ್ಯ ರಚನೆಗಳಾಗಲೀ ಕಾಣುವುದಿಲ್ಲ.

ಪ್ರೊ. ಓ.ಎಲ್. ನಾಗಭೂಷಣ ಸ್ವಾಮಿ : ಪುಸ್ತಕ ಮಾಹಿತಿ(ಕ.ವಿ.ವಿ. ಹಂಪಿ) ಜೂನ್, ೧೯೯೪, ಪು- ೬

ಸೌಂದರ್ಯಾನುಭೂತಿಯ ಬೌದ್ಧಿಕ ವಿಶ್ಲೇಷಣೆ ಅತ್ಯಂತ ತೊಡಕಿನ ವಿಷಯ. ಸೌಂದರ್ಯ ಇರುವುದು ವಸ್ತು, ವಿಚಾರಗಳಲ್ಲಿಯೇ ಅಥವಾ ಅದನ್ನು ಕಾಣುವ ದೃಷ್ಟಿಯಲ್ಲಿಯೇ: ಯಾವುದು ಸುಂದರ? ಎಂದು ಮುಂತಾಗಿ ಮೊದಲಿನಿಂದ ಕೊನೆಯ ವರೆಗೆ ಪ್ರಶ್ನೆಗಳನ್ನೇ ಕೆರಳಿಸುವ ಇಂಥ ಒಂದು ದುರವಗ್ರಾಹ್ಯವಾದ ವಿಷಯವನ್ನು ಎತ್ತಿಕೊಂಡು ಡಾ. ಶಿವರುದ್ರಪ್ಪನವರು ತಮ್ಮ 'ಸೌಂದರ್ಯ ಸಮೀಕ್ಷೆ' ಎಂಬ ಬೃಹತ್ ವಿಮರ್ಶಾ ಗ್ರಂಥವನ್ನು ಬರೆದಿದ್ದಾರೆ.

ವಿ.ಎಂ. ಇನಾಂದಾರ್ 'ಸ್ನೇಹ ಕಾರ್ತೀಕ' ಪು-೨೯

ಸೌಂದರ್ಯ ಮೀಮಾಂಸೆಯ ಪ್ರವೇಶವಿಲ್ಲದವರು ಸಮದೃಷ್ಟಿಯಿಂದ ಸಾಹಿತ್ಯ ವಿಮರ್ಶೆ ಮಾಡುವುದು ಕಷ್ಟವೆಂದು ನಾನು ಮೊದಲಿನಿಂದ ನಂಬಿದ್ದೇನೆ. ಸೌಂದರ್ಯ ಸಮೀಕ್ಷೆ ಓದಿದ ನಂತರ ನಿಮ್ಮ ಸಾಹಿತ್ಯ ವಿಮರ್ಶಕ ಬುದ್ಧಿಯ ತರಬೇತಿ ಮತ್ತು ಸಿದ್ಧತೆಯ ಒಂದು ತಕ್ಕ ಮಟ್ಟಿನ ಕಲ್ಪನೆಯು ನನ್ನಲ್ಲಿ ಉಂಟಾಗಿದೆ.

ಎಸ್.ಎಲ್. ಭೈರಪ್ಪ.

ಸ್ವರೂಪದ ದೃಷ್ಟಿಯಿಂದ 'ಕಾವ್ಯಾರ್ಥ ಚಿಂತನ' ಕುವೆಂಪು ಅವರ 'ದಾರ್ಶನಿಕ ಕಾವ್ಯ ಮೀಮಾಂಸೆ'ಯನ್ನು ಹೋಲುತ್ತದೆ..........ಆಧುನಿಕ ಕನ್ನಡ ವಿಮರ್ಶೆಯ ಇಂದಿನ ಗೊಂದಲದ ಪರಿಸ್ಥಿತಿಯಲ್ಲಿ, ಕಾವ್ಯಮೀಮಾಂಸೆಯ ಹೊಸ ಪರಿಕಲ್ಪನೆಗಳನ್ನು ಖಚಿತಗೊಳಿಸಿರುವ ಈ ಕೃತಿ ವಿಮರ್ಶೆಯ ಕ್ಷೇತ್ರದಲ್ಲಿಯೂ ಮಾರ್ಗದರ್ಶಕ ಕೃತಿಯಾಗಿದೆ.

ತೀ. ನಂ. ಶಂಕರನಾರಾಯಣ ಸಾಧನೆ ಸಂಪುಟ -೧೩, ಸಂಚಿಕೆ -೩

**ಸಾಹಿತ್ಯ ವಿಮರ್ಶೆ**

ಒಂದು ಚಾರಿತ್ರಿಕ ಸಂದರ್ಭ ಮತ್ತು ಸಾಹಿತ್ಯ ಕೃತಿ ಇವುಗಳ ನಡುವಣ ಸಂಬಂಧದಲ್ಲಿನ ನಿಲುವುಗಳ ಅಭ್ಯಾಸಕ್ಕೆ 'ವಿಮರ್ಶೆಯ-ಪೂರ್ವ-ಪಶ್ಚಿಮ' ಒಂದು ಮಹತ್ವದ ಉದಾಹರಣೆ. ಕೃತಿಯಲ್ಲಿ ಚರ್ಚಿತವಾಗಿರುವ ಸಾಹಿತ್ಯ ವಿಮರ್ಶೆಯ ಮಾನದಂಡಗಳನ್ನು ಚಾರಿತ್ರಿಕವಾಗಿ ವಿಶ್ಲೇಷಿಸುವುದು ಲೇಖಕರ ಮೊದಲ ಉದ್ದೇಶ. ಅನಂತರ ಆ ವಿಶ್ಲೇಷಣೆಯಲ್ಲಿನ ಸಾಧಕ ಬಾಧಕಗಳನ್ನು ಚರ್ಚೆಗೆ ಗುರಿಪಡಿಸುವುದು ಎರಡನೆಯದು, ಮೂರನೆಯ ಹಂತದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖಕರ ವಿಮರ್ಶೆಯ ನಿಲುವುಗಳನ್ನು ತಲುಪುವ ಉದ್ದೇಶವನ್ನು ಹೊಂದಿದೆ.

**ಕಿ. ರಂ. ನಾಗರಾಜು 'ಸ್ನೇಹ ಕಾರ್ತೀಕ' ಪು - ೩೧೮**

ಒಂದೊಂದರಲ್ಲಿಯು ತುಂಬಾ ಪರಿಶ್ರಮವಹಿಸಿ, ಅದರಲ್ಲಿ ತೊಡಕು ಯಾವುದು? ಅದನ್ನು ಬಿಚ್ಚಿದ್ದು ಬಿಡಿಸಿದ್ದು ಹೇಗೆ ಎಂಬುದನ್ನು ಥಾಳಾಗಿ ಹೃದಯಂಗಮವಾಗುವಂತೆ, ಚಿತ್ತವೇದಕವಾಗುವಂತೆ ನಿರೂಪಣೆ ಮಾಡಿದ್ದಾರೆ. ಪಂಪನಿಂದ ಲಕ್ಷ್ಮೀಶನವರೆಗೆ ವಿವಿಧ ಮಹಾತ್ಮರ ಚಿತ್ರ ನಮ್ಮ ವಿಮರ್ಶೆಗೆ ಅನ್ನವಾಗುತ್ತದೆ. ಅದು ರುಚಿಯಾಗಿದೆ. ಶುಚಿಯಾಗಿದೆ. ವಿನಯದ ನೆಪದಿಂದ ಅಸ್ಪಷ್ಟತೆಗೆ ಜಿ.ಎಸ್.ಎಸ್. ಎಡೆ ಕೊಟ್ಟಿಲ್ಲ (ಪರಿಶೀಲನ).

**ಬೇಂದ್ರೆ**

ಡಾ॥ ಶಿವರುದ್ರಪ್ಪನವರ 'ಪರಿಶೀಲನ' ರಸ ವಿಮರ್ಶೆಗೆ ಅಂಟಿಕೊಳ್ಳುವ ಭಾವಾತಿರೇಕ, ಸಂಶೋಧನೆಗೆ ಸಂಗಡಿಸಿ ಬರುವ ನೀರಸ-ಇವೆರಡು ಪುಲಿದರಿಗಳಿಂದಲೂ ಪಾರಾಗಬೇಕೆಂಬ ಯತ್ನದಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

**ಡಾ. ಕೆ. ಕೃಷ್ಣಮೂರ್ತಿ**

'ಪರಿಶೀಲನ'ದಿಂದ ಮೊದಲಾದ 'ಗತಿಬಿಂಬ,' 'ನವೋದಯ', 'ಅನುರಣನ', 'ಪ್ರತಿಕ್ರಿಯೆ' ಮತ್ತು 'ಬೆಡಗು'ವರೆಗಿನ ಅವರ ವಿಮರ್ಶೆಯ ಸಂಕಲನಗಳು ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಸಾಹಿತ್ಯ ಕೃತಿಗಳ ಬಗೆಗೆ ಸಮರ್ಥ ಒಳನೋಟಗಳನ್ನು ನೀಡುತ್ತವೆ. ಕೆಲವೊಮ್ಮೆ ಸಾಂಸ್ಕೃತಿಕ ಮಹತ್ವವನ್ನು ಎತ್ತಿ ಹೇಳುವ ಕಡೆಗೆ ವಿಮರ್ಶೆ ಒಲಿಯುತ್ತದೆ. ಕಾವ್ಯದಲ್ಲಿ ಶ್ರೇಷ್ಠವಾದ ಅಂಶಗಳನ್ನು, ಪರಂಪರೆಯಲ್ಲಿ ಮಹತ್ವವಾದುದನ್ನು ಗುರುತಿಸುವಲ್ಲಿ ಜಿ.ಎಸ್.ಎಸ್. ಯಶಸ್ವಿಯಾಗುತ್ತಾರೆ.

**ಡಾ. ಕೆ.ವಿ. ನಾರಾಯಣ ಸಾಲುದೀಪಗಳು, ಪುಟ -೩೦೫**

'ಪರಿಶೀಲನ' ದ ಲೇಖನ ಸಂಗ್ರಹವು ಅವರ ವಿಮರ್ಶನ ದೃಷ್ಟಿ, ಸಂಶೋಧಕ ಪ್ರವೃತ್ತಿ, ಕಾವ್ಯಸೌಂದರ್ಯವನ್ನು ಸವಿಯುವ ರಸ ದೃಷ್ಟಿಗಳಿಂದ ಕೂಡಿದ ಉತ್ತಮ ಗ್ರಂಥವಾಗಿದೆ. ಅನೇಕ ಕಡೆಗಳಲ್ಲಿ ಅವರು ತೋರುವ ಒಳನೋಟ, ನೀಡುವ ವ್ಯಾಖ್ಯಾನ, ಮಾಡುವ ವಿಶ್ಲೇಷಣೆ, ತರ್ಕ ಬದ್ಧವಾದ ವಿವೇಚನೆ - ಇವುಗಳು ಅವರ ಲೇಖನಗಳಲ್ಲಿ ಹೊಸದಾದ

ಅಂಶಗಳನ್ನು ಸೃಷ್ಟಿಸುತ್ತವೆ. ಮರೆವಿನಾಳದ ವಿಷಯಗಳನ್ನು ಅಗೆದು ತೆಗೆಯುವ ಸಂದರ್ಭಗಳಲ್ಲಿಯೂ ಅವರ ರಸದೃಷ್ಟಿ ಅವರ ಲೇಖನಗಳನ್ನು ನೀರಸತೆಯಿಂದ ಬಿಡುಗಡೆ ಮಾಡುತ್ತದೆ. ಜಿ.ಎಸ್.ಎಸ್. ಸಹೃದಯ ವಿಮರ್ಶಕರಾಗಿ ಮೆರೆದಿದ್ದಾರೆ.

ಪಿ. ವಿ. ನಾರಾಯಣ 'ಸ್ನೇಹ ಕಾರ್ತೀಕ' ಪು - ೩೦೫

'ಸಮಗ್ರಗದ್ಯ' ಎರಡನೇ ಸಂಪುಟವು, ಸಾಹಿತ್ಯ ತತ್ವ ಮತ್ತು ಸಮಕಾಲೀನ ಸಾಹಿತ್ಯವನ್ನು ಕುರಿತ ಲೇಖನಗಳನ್ನು ಒಳಗೊಂಡಿದೆ. ಪಾಶ್ಚಾತ್ಯ ಪ್ರಭಾವ, ಬಹುರೂಪೀ ಸಾಂಸ್ಕೃತಿಕ ಪರಂಪರೆಯ ಅನನ್ಯತೆ ಮತ್ತು ಸಾಮಾಜಿಕ ಬದಲಾವಣೆಗಳೆಂಬ ಮೂರು ಸಂಗತಿಗಳ ಮುಖಾಮುಖಿಯಿಂದ ಆಧುನಿಕ ಕನ್ನಡ ಕಾವ್ಯವು ತನ್ನ ಆಶಯ, ಆಕೃತಿಗಳಲ್ಲಿ ವಿಕಸನಗೊಂಡಿರುವ ಬಗೆಯು ಈ ಲೇಖನಗಳ ಭಿತ್ತಿಯಾಗಿದೆ.

ಎಚ್.ಎಸ್. ರಾಘವೇಂದ್ರರಾವ್

ಪರಂಪರೆ ಮತ್ತು ಆಧುನಿಕತೆಗಳ ನಡುವಣ ಸೇತುವಾಗಿ ಕನ್ನಡ ಅಧ್ಯಯನಕ್ಕೆ ಪ್ರಬುದ್ಧತೆಯನ್ನು ತಂದಿತ್ತ ಹಿರಿಯರು ಅವರು. ಯಾವುದೇ ಪಂಥ ಅಥವಾ ವ್ಯಕ್ತಿಯ ಬಗ್ಗೆ ಕಹಿಯಾಗದೆ, ವಕ್ರವಾಗದೆ, ಸೌಮ್ಯವಾಗಿ ಆದರೆ ಖಚಿತವಾಗಿ ಗಂಭೀರವಾಗಿ ತಮ್ಮ ನಿಲುವುಗಳನ್ನು ವಿಮರ್ಶೆಯಲ್ಲಿ ಮಂಡಿಸುವುದು ಅವರ ಬರವಣಿಗೆ ಲಕ್ಷಣ.....ಕಾಲ, ಧರ್ಮ ಮತ್ತು ಕಾಲಾತೀತ ಇವುಗಳ ಹೊಂದಾಣಿಕೆ, ಸಮತೂಕ ಇವು ಜಿ.ಎಸ್.ಎಸ್. ಅವರಿಗೆ ಸಾಹಿತ್ಯ ಮತ್ತು ವಿಮರ್ಶೆಯ ಮುಖ್ಯ ಪ್ರಶ್ನೆಯಾಗಿ ಕಂಡಿವೆ.

ಪ್ರೊ. ಓ.ಎಲ್. ನಾಗಭೂಷಣ ಸ್ವಾಮಿ ಪುಸ್ತಕ ಮಾಹಿತಿ, ಜೂನ್, ೧೯೯೪ (ಕ.ವಿ.ವಿ.ಹಂಪಿ) ಪು -೬

ಜಿ. ಎಸ್. ಎಸ್. ವಿಮರ್ಶೆಯ ದೃಷ್ಟಿ ಸಿದ್ಧ ಕೃತಿಗಳ ಸೌಂದರ್ಯದರ್ಶನಕ್ಕೆ ಮಾತ್ರ ಪರಿಮಿತವಾಗಿಲ್ಲ. ಕೃತಿ ವಿಮರ್ಶೆಗೆ ಸರಿಸಮಾನವಾಗಿ ಸಾಹಿತ್ಯದ ಸತ್ವ, ಸ್ವರೂಪ, ಅದರ ಅನುಭೂತಿಯ ವೈಶಿಷ್ಟ್ಯ, ವಿಮರ್ಶೆಯ ರೀತಿ, ವಿಧಾನ-ಅದರ ಹಲವಾರು ಸಮಸ್ಯೆಗಳೆಂದು ಸಾಹಿತ್ಯ ಮತ್ತು ಅದರ ವಿಮರ್ಶೆಯ ತಾತ್ವಿಕ ಅನ್ವೇಷಣೆಗೂ ತಮ್ಮ ಗಮನವನ್ನು ಹರಿಸಿದ್ದಾರೆ. 'ವಿಮರ್ಶೆಯ ಪೂರ್ವ ಪಶ್ಚಿಮ' ಮತ್ತು 'ಗತಿಬಿಂಬ' ಎಂಬ ಗಮನಾರ್ಹವಾದ ವಿಮರ್ಶಾತ್ಮಕ ಲೇಖನಗಳ ಸಂಗ್ರಹಗಳನ್ನು ಒದಗಿಸಿದ್ದಾರೆ.

ವಿ. ಎಂ. ಇನಾಂದಾರ 'ಸ್ನೇಹ ಕಾರ್ತೀಕ' ಪು-೨೯

**ಸಹೃದಯರ ದೃಷ್ಟಿಯಲ್ಲಿ ಜಿ.ಎಸ್.ಎಸ್.**

ಡಾ. ಜಿ.ಎಸ್.ಎಸ್. ಕನ್ನಡ ಸಾರಸ್ವತ ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಗಳಿಸಿರುವುದಲ್ಲದೆ, ತಮ್ಮ ಹಲವಾರು ಕೊಡುಗೆಗಳಿಂದ ಕನ್ನಡದ ಶ್ರೀಮಂತಿಕೆಯನ್ನು ಬೆಳೆಸಿದ್ದಾರೆ. ಎಲ್ಲ ಹಂತಗಳಲ್ಲಿ ಶ್ರಮವನ್ನು ಅವಲಂಬಿಸಿ ಮುನ್ನಡೆದ ಶಿವರುದ್ರಪ್ಪನವರು ಕಷ್ಟ ಸಹಿಷ್ಣು ನೇರ ಸ್ವಭಾವದ ಸರಳ ಸಹಜ ಜೀವಿ.

ಶ್ರೀ ಶಿವಕುಮಾರ ಸ್ವಾಮಿಗಳು

ಕನ್ನಡ ಸಾಹಿತ್ಯದ ಕಾವ್ಯ ಮತ್ತು ವಿಮರ್ಶೆಯ ಕ್ಷೇತ್ರಗಳಲ್ಲಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿರುವುದಲ್ಲದೆ, ನೂರಾರು ವಿದ್ಯಾರ್ಥಿಗಳಿಗೆ ಶ್ರದ್ಧೆಯಿಂದ ಪಾಠ ಹೇಳಿ ಅವರೂ ಸಾಹಿತ್ಯಕ್ಕಾಗಿ ದುಡಿಯುವಂತೆ ಮಾಡಿರುವ ಡಾ. ಶಿವರುದ್ರಪ್ಪ ಅಭಿನಂದನೀಯರು.

– **ಕುವೆಂಪು**

ಡಾ. ಜಿ.ಎಸ್.ಎಸ್. ಪ್ರೌಢರಾಗಿದ್ದಾರೆ. ತಮ್ಮ ಸಾಹಿತ್ಯ ನಿರ್ಮಿತಿಯೊಡನೆ, ಇತರರ ಸಾಹಿತ್ಯದ ನಿರ್ವಾಹವನ್ನು ನೋಡಿಕೊಳ್ಳುತ್ತಿದ್ದಾರೆ. ಅವರಿಗೆ ಕೆಲಸದ ತೂಕ ಹೆಚ್ಚುತ್ತಿದೆ. ನನಗೆ ವಯಸ್ಸಾದಂತೆ ತರುಣ ಸಾಹಿತಿಗಳ ಬೆಳವಣಿಗೆಯನ್ನು ತಟಸ್ಥನಾಗಿ ಕುಳಿತು ನೋಡುವ, ಚಟಾ ಎನ್ನಲೋ, ಛಲಾ ಎನ್ನಲೋ ಹೆಚ್ಚಾಗುತ್ತಿದೆ.

**ದ.ರಾ. ಬೇಂದ್ರೆ**

ಶ್ರೀಯುತರ ಸಾಹಿತ್ಯ ರಚನೆ ಉತ್ತಮ ರೀತಿಯದು. ಅವರ ಪಾಂಡಿತ್ಯ ಉನ್ನತವಾದದ್ದು. ಅವರ ವಿಮರ್ಶೆ ಪ್ರಾಯಶಃ ಸಹೃದಯ ಆದದ್ದು. ಹೀಗಾಗಿ ಇವರು ಕವಿಯಾಗಿ, ಉಪಾಧ್ಯಾಯರಾಗಿ, ವಿಮರ್ಶಕರಾಗಿ ನಮ್ಮ ಇಂದಿನ ಸಾಹಿತ್ಯದಲ್ಲಿ ಭಾಷಾವ್ಯಾಸಂಗದಲ್ಲಿ ಉನ್ನತಮಟ್ಟದ ಸೇವೆಯನ್ನು ಸಲ್ಲಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ನಿರ್ದೇಶಕರಾದ ಮೇಲೆ ಇವರು ಏರ್ಪಡಿಸಿಕೊಂಡು ಬಂದಿರುವ ವಿಚಾರ ಗೋಷ್ಠಿಗಳು ಸಾಹಿತ್ಯವನ್ನು, ಈ ತಲೆಮಾರಿನ ಲೇಖಕ ಸಮುದಾಯದ ಆಲೋಚನೆಗಳನ್ನು ಜನರ ಗಮನಕ್ಕೆ ತರಲು ತುಂಬ ಸಾಧಕ ಆಗಿವೆ.

**ಮಾಸ್ತಿ ವೆಂಕಟೇಶ್ ಅಯ್ಯಂಗಾರ್**

ಜಿ.ಎಸ್.ಎಸ್. ಅವರ ಕಾವ್ಯದ ತೆರೆದ ದಾರಿಯಲ್ಲಿ ನವೋದಯ, ನವ್ಯಗಳ ಪಕ್ಷ-ಪಂಗಡಗಳಿಲ್ಲ; ಸದ್ದುಗದ್ದಲಗಳಿಲ್ಲ, ಸಮಚಿತ್ತದಿಂದ, ಸಮತೂಕದಿಂದ, ಸಮನ್ವಯ ಮನೋಧರ್ಮದಿಂದ ಅವರು ತಮ್ಮದೇ ಆದ ರೀತಿಯಲ್ಲಿ ನಡೆದವರು. ಅವರ ಕಾವ್ಯ ಸುಸಂಸ್ಕೃತವಾದದ್ದು, ಸೌಂದರ್ಯ ನಿಷ್ಠವಾದುದು.

**ಆರ್.ಸಿ. ಹಿರೇಮಠ**

ಕಾವ್ಯದಲ್ಲಿ, ಸೌಂದರ್ಯಶಾಸ್ತ್ರದಲ್ಲಿ, ವಿಮರ್ಶೆಯಲ್ಲಿ ತಮ್ಮವೇ ಆದ ಅನೇಕ ವೈಶಿಷ್ಟ್ಯ ಗಳನ್ನು ಡಾ. ಶಿವರುದ್ರಪ್ಪನವರು ಸಾಧಿಸಿದ್ದಾರೆ. ಸಿದ್ಧಹಸ್ತರಾದ ಅವರ ಬಳಿಗೆ ಇನ್ನೂ ಅನೇಕ ಸಿದ್ಧಿಗಳು ಕಾದಿರುವುದು ಸಹಜವಾಗಿದೆ. ಕನ್ನಡ ಇಲಾಖೆಯ ಮುಖ್ಯಸ್ಥರಾಗಿಯೂ ಹಲವಾರು ವಿಕ್ರಮಗಳನ್ನು ಅವರು ಸ್ಥಾಪಿಸಿದ್ದಾರೆ.

**ವಿ.ಕೃ. ಗೋಕಾಕ್**

ಡಾ. ಜಿ.ಎಸ್.ಎಸ್. ಮೇಧಾವಿ ವಿದ್ಯಾರ್ಥಿ. ಈ ಮಾತಿಗೆ ಅವರ ಪದವಿ ಪರೀಕ್ಷೆಗಳ ಉತ್ತರ ಪತ್ರಿಕೆ, ಮೌಖಿಕ ಪರೀಕ್ಷೆಯಲ್ಲಿಯ ಉತ್ತರ ಮತ್ತು ಮಹಾಪ್ರಬಂಧ ರಚನೆಗಳು ಪರಿಶೀಲನಕಾರರಿಗೆ ಸ್ಪಷ್ಟವಾದ ಸಾಕ್ಷ್ಯ ಒದಗಿಸಿದವು. ಅವರು ವ್ಯಾಸಂಗ ನಿಷ್ಠ ಅಧ್ಯಾಪಕರು. ಬಾಳಿನ ಉತ್ತಮ ಮೌಲ್ಯಗಳತ್ತ ಗಮನವಿಟ್ಟು ಸ್ವತಂತ್ರವಾದ ಬಗೆಯಲ್ಲಿ ಬಾಳುವುದನ್ನು, ಅವರು ವಿದ್ಯಾರ್ಥಿದೆಸೆಯಿಂದಲೂ ರೂಢಿಸಿಕೊಂಡಿದ್ದಾರೆ.

ಸೂಕ್ಷ್ಮ ಸಂವೇಧನಾ ಶೀಲತೆ, ಸಾಮಾಜಿಕ ಪ್ರಜ್ಞೆ, ಕಲ್ಪಕತೆಗಳಿಂದ ಕೂಡಿದ ಶಿವಮಯ ಕವನ ಸೃಷ್ಟಿ; ಕೃತಕ, ಕೀಳು ವ್ಯವಹಾರಗಳನ್ನು ಕಂಡಾಗ ಕನಲಿ ನಿರ್ದಾಕ್ಷಿಣ್ಯ ವಾಗಿ ಖಂಡಿಸಬಲ್ಲ ರುದ್ರಮಯ ದೃಷ್ಟಿ ಅವರದಾಗಿದೆ. ಆದರೆ ಖಂಡಿಸುವಾಗ ಸದಭಿರುಚಿಯ ಎಲ್ಲೆಯನ್ನು ಮೀರದ ವಿವೇಕವನ್ನು ಅವರು ತಾರುಣ್ಯದ ಭರ ದಲ್ಲಿಯೂ ತೋರಿದುದನ್ನು ನಾನು ಮೆಚ್ಚಿಕೊಂಡೆ. ಹೊಸಪೀಳಿಗೆಯ ಹೊಸ ರುಚಿಯ ಕವಿಗಳಲ್ಲಿ ಅವರ ಕವನ ರಚನೆ ನಿರ್ದುಷ್ಟ, ಸ್ಪಷ್ಟ, ಅರ್ಥಪೂರ್ಣ, ರಮಣೀಯ, ಪರಿಣಾಮ ಕಾರಿಯೆಂಬುದನ್ನು ಬಹು ಜನರು ಒಪ್ಪುತ್ತಾರೆ. ಅವರ ವಿಮರ್ಶೆಯಲ್ಲಿ ಪಾಂಡಿತ್ಯ, ಖಚಿತತ್ವ, ಸಮತೂಕ, ಸಮರ್ಪಕ ಮೌಲ್ಯಮಾಪನಗಳು ಕಂಡು ಬರುತ್ತಿವೆ.

ಸ.ಸ. ಮಾಳವಾಡ

ಈ ಕವಿಗೆ ಸಹೃಧಯರಿಗಿಂತ ಆಪ್ತರಿಲ್ಲ. ನನ್ನ ಕೃತಿಗಳ ವಿಚಾರದಲ್ಲಿ ಈತ ತುಂಬ ಮಮತೆಯನ್ನು ತೋರಿಸಿದ್ದಾರೆ. 'ಮಲೆದೇಗುಲ'ದ ಮೇಲಣ ಅವರ ವಿಮರ್ಶೆ ತುಂಬ ಹಾರ್ದವಾಗಿದೆ. ಅಭಿಜ್ಞವಾಗಿದೆ. ಶಿವರುದ್ರಪ್ಪನವರು ಮೇಧಾವಿ, ಜತೆಗೆ ಸಹೃದಯ ಭಾವುಕ; ಎರಡೂ ತೀ. ನಂ. ಶ್ರೀ ಗೆ ಬಹುಪ್ರಿಯವಾದ ಗುಣಗಳು.

ಪು.ತಿ. ನರಸಿಂಹಾಚಾರ್

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕ್ರಮವಾಗಿ ಅಧ್ಯಯನ ಮಾಡಿರುವ ಶಿವರುದ್ರಪ್ಪನವರು ನಮ್ಮ ಸಾಹಿತ್ಯ ಪಥವನ್ನು ಅರಿತವರಾದ್ದರಿಂದ ಅವರ ವಿಮರ್ಶೆ ತನ್ನದೇ ಆದ ಗಾಂಭೀರ್ಯವನ್ನು ಕಾಪಾಡಿಕೊಂಡು ಬಂದಿದೆ. ಈ ವಿದ್ವತ್ತಿನ ಮೌಲ್ಯವನ್ನು ಹತ್ತು ಪಟ್ಟು ಹೆಚ್ಚಿಸಿದೆ. ಅವರ ವಿನಯ ಸೌಜನ್ಯಗಳ ನರುಗಂಪು.

ಒಳ್ಳೆಯದು ಒಳ್ಳೆಯದನ್ನೇ ಮಾಡುತ್ತದೆ. ತಾನೂ ಬಂಗಾರವಾಗಿ ಬಾಳುತ್ತದೆ ಎಂದು ನಾನು ಹೇಳಿದ್ದುಂಟು. ಮಂದಸ್ಮಿತದ ಜಿ.ಎಸ್.ಎಸ್. ಅದಕ್ಕೊಂದು ಉಜ್ವಲ ನಿದರ್ಶನವಾಗಿದ್ದಾರೆ. 'ಮಗು ನಡೆದು ಮನೆಯ ನೆಲ ಮಿದುವಾಯಿತು' ಎಂಬ ಅವರದೇ ಒಂದು ಕಾವ್ಯಪಂಕ್ತಿ ನನ್ನನ್ನು ಅವರ ಮನೆಗೆ ಕರೆದೊಯ್ದಿತು.

ಕೆ.ಎಸ್. ನರಸಿಂಹಸ್ವಾಮಿ

ಬರಹದಲ್ಲೂ ಬದುಕಿನಲ್ಲೂ ಅವರದ್ದು ಸೌಂದರ್ಯ ನಿಷ್ಠವಾದ 'ಸಮನ್ವಯ' ದೃಷ್ಟಿ ಎಂಬುದನ್ನು ಅವರ ಬರಹಗಳನ್ನು ಓದಿ ಅವರ ನಡವಳಿಕೆಯನ್ನು ನಿರೀಕ್ಷಿಸಿ, ನಾನು ಕಂಡುಕೊಂಡಿದ್ದೇನೆ.

**ಎಂ.ವಿ. ಸೀತಾರಾಮಯ್ಯ**

ಒಂದು ಸಾಹಿತ್ಯ ಕೃತಿ (ದೇವಶಿಲ್ಪ) ಯ ಮೂಲಕ ಸಂಘಟಿಸಿದ ಸಂಪರ್ಕವೇ ಮುಂದೆ ಅನ್ಯೋನ್ಯ ಸ್ನೇಹಾರ್ದ ಭಾವನೆಗಳಿಗೆ ಅವಕಾಶವನ್ನು ಒದಗಿಸಿತು. ಅವರದು ಬಿಗುಮಾನದ ರೀತಿ, ಅವರೊಡನೆ ಸ್ನೇಹ ಸುಲಭ ಸಾಧ್ಯವಲ್ಲ ಎಂದು ಯಾರು ಬೇಕಾದರವರು ಹೇಳಿದರೂ ಅದನ್ನು ಅಲ್ಲಗಳೆಯಬಲ್ಲ ಸ್ನೇಹಶೀಲತೆಯನ್ನು ನಾನು ಅವರಲ್ಲಿ ಕಂಡಿದ್ದೇನೆ. ಕೆಲಮಟ್ಟಿಗೆ ಅನುಭವಿಸಿಯೂ ಇದ್ದೇನೆ.

**ವಿ.ಎಂ. ಇನಾಂದಾರ್**

ಶ್ರೀ ಜಿ.ಎಸ್.ಎಸ್. ಅವರ ಪಾಠದ ದೊಡ್ಡ ಗುಣವೆಂದರೆ ತನ್ಮಯತೆ. ವಿದ್ಯಾರ್ಥಿಗಳಿಗೆ ತಿಳಿಯಿತೋ ಇಲ್ಲವೋ ಅದು ಅವರಿಗೆ ಆಗ ಮುಖ್ಯವಾಗಿರಲಿಲ್ಲ. ಅವರು ನಮ್ಮನ್ನು ಎದುರಿಸಿ ಎಂದರೆ ನಮ್ಮನ್ನು ನೋಡುತ್ತ ಪಾಠ ಮಾಡುತ್ತಿದ್ದರೆಂದು ಈಗ ಅನ್ನಿಸುವುದಿಲ್ಲ. ಪಕ್ಕಕ್ಕೆ ತಿರುಗಿ ಎಲ್ಲೋ ನೋಡುತ್ತ, ಏನನ್ನೋ ಕಲ್ಪಿಸುತ್ತ, ತಮಗೆ ತಾವೇ ಪಾಠ ಹೇಳಿಕೊಳ್ಳುತ್ತಿದ್ದರು. ನಾವು ಕುಳಿತು ಕೇಳುತ್ತಿದ್ದೆವು.

**ಡಾ. ಎಂ. ಚಿದಾನಂದಮೂರ್ತಿ.**

ಸಂಯಮದ ಮಾತು - ಬರಹ, ಸಮಸ್ಥಿತಿಯ ಮನೋಭಾವ, ದೂರದೃಷ್ಟಿಯ ನಡೆ, ತಿಳಿಹಾಸ್ಯದ ನುಡಿ, ಹೀಗೆ ಹೀಗೆಯೇ ಇರಬೇಕೆಂಬ ಖಚಿತ ನಡವಳಿ, ಯಾವುದಕ್ಕೂ ಅತಿಯಾಗಿ ಅಂಟಿಕೊಂಡು, ತನ್ನತನವನ್ನು ಅದಕ್ಕೆ ಶರಣಾಗಿಸದ ಸಂಯಮ, ಕುಟಿಲ-ಕುಹಕ, ತಂತ್ರಗಳಿಗೆಡೆಗೊಡದ ನೇರ ನಡಿಗೆ, ಪರಿಸ್ಥಿತಿಯೊಡನೆ ರಾಜಿಮಾಡಿಕೊಳ್ಳದೆ, ಸ್ವಸ್ಥಿತಿಯನ್ನು ಕೈಬಿಡದೆ ಬಾಳುವ ಎಚ್ಚರ, ಯಾವುದೂ ಅತಿಯಾಗದ ಮಿತ-ಹಿತ ಮುಂತಾದ ವೈಶಿಷ್ಟ್ಯಗಳ ವ್ಯಕ್ತಿ ಡಾ. ಜಿ.ಎಸ್.ಎಸ್.

**ಎಸ್. ಎಂ. ವೃಷಬೇಂದ್ರ ಸ್ವಾಮಿ**

ತಮ್ಮ ನಿಲುವು, ದರ್ಶನ ಇವಾವುದರ ಬಗೆಗೂ ಜಿ.ಎಸ್.ಎಸ್. ಅವರು 'ಡಾಗ್‌ಮೆಟಿಕ್' ಆಗಿಲ್ಲದಿರುವುದು ಅವರ ಸತ್ವಪೂರ್ಣ ವ್ಯಕ್ತಿತ್ವದ ಲಕ್ಷಣವಾಗಿದೆ.

**ಜಯಸುದರ್ಶನ**

ನಾನು ಬಲ್ಲ ಕೆಲವೇ ಜನ ಪ್ರಾಮಾಣಿಕ, ಜಾಣ ಮನುಷ್ಯರಲ್ಲಿ ಶಿವರುದ್ರಪ್ಪ ಒಬ್ಬರು. ಅವರು ಕನ್ನಡ ಇಲಾಖೆಯ ಮುಖ್ಯಸ್ಥರಾಗಿ ಅನೇಕ ತಪ್ಪು ಮಾಡಬಹುದಿತ್ತು. ಆದರೆ ಪ್ರತಿಯೊಂದು ಕೆಲಸದಲ್ಲೂ ಸರಿ, ತಪ್ಪುಗಳ ಬಗ್ಗೆ ಚಿಂತಿಸಿ ತಮ್ಮ ಪ್ರೀತಿ ಮತ್ತು ಇಲಾಖೆಯ ನಿಯಮಕ್ಕೆ ಬದ್ಧರಾಗಿ ವರ್ತಿಸಿದ್ದಾರೆ.

**ಪಿ. ಲಂಕೇಶ್**

ಅನುಬಂಧ ೧

# ಜಿ.ಎಸ್. ಶಿವರುದ್ರಪ್ಪನವರ ಕೃತಿಗಳು

## ಕಾವ್ಯ

ಸಾಮಗಾನ :- ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೫೧, ೬+೮೮+೪, ಹಾಡು ಹಣತೆ, ಬಲಿ, ತಾಯಿ, ಇತ್ಯಾದಿ ೬೪ ಕವನಗಳು

ಚೆಲುವು ಒಲವು :- ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು. ೧-೧೯೫೩, ೪-೧೯೭೪, ೧೨+೬೬ ಅಲೆಗಳು, ಕಾವೇರಿ, ಜಡೆ, ಇತ್ಯಾದಿ ೪೪ ಭಾವಗೀತೆಗಳು.

ಸಂಜೆದಾರಿ :- ನೇತ್ರಾವತಿ ಪ್ರಕಾಶನ, ಬೆಂಗಳೂರು. ೧೯೫೪, ೮+೩೦. ಸಂಜೆದಾರಿ, ಮಾಗಿ, ಪತಿತ ಮುಂತಾದ ೨೦ ಕವನಗಳು.

ದೇವಶಿಲ್ಪ :- ಶಾರದಾ ಮಂದಿರ, ಮೈಸೂರು. ೧೯೫೬, ೮+೮೦. ಪ್ರಣಯ, ಪಯಣ, ರೈಲು, ಬಾಡಿಗೆ ಮನೆ ಇತ್ಯಾದಿ ೪೪ ಕವನಗಳು.

ದೀಪದ ಹೆಜ್ಜೆ :- ಜಿ.ಕೆ. ಮತ್ತು ಸಹೋದರರು, ಬೆಂಗಳೂರು. ೧೯೫೯, ೯+೭೮. ಔತಣ, ಮಾಗಿ, ಇವನು ಮುಂತಾದ ೩೭ ಕವನಗಳು.

ತೀರ್ಥವಾಣಿ (ಅನು) :- ಶ್ರೀರಾಮಕೃಷ್ಣಾಶ್ರಮ, ಮೈಸೂರು. ೧೯೬೦. 'ಮಾ' ಅವರ ಶ್ರೀ ರಾಮಕೃಷ್ಣ ವಚನ ವೇದದಲ್ಲಿ ಬರುವ ೫೦ ಬಂಗಾಳಿ ಭಕ್ತಿ ಗೀತೆಗಳ ಅನುವಾದ.

ಕಾರ್ತೀಕ :- ಶಾರದ ಮಂದಿರ, ಮೈಸೂರು. ೧೯೬೧, ೬+೫೪ ಮೋಡಿ, ಶಾರದೆ, ಗಾರುಡಿ ಇತ್ಯಾದಿ ೪೦ ಕವನಗಳು.

ಅನಾವರಣ :- ಮೋಹನ ಪ್ರಕಾಶನ, ಮೈಸೂರು. ೧೯೬೩. ೪+೭೦ ಮೊರೆ, ಹಾರೈಕೆ, ಕವಿ-ಕಿವಿ ಇತ್ಯಾದಿ ೪೧ ಕವನಗಳು.

ತೆರೆದ ದಾರಿ :- ಗಂಗಾ-ತರಂಗ, ಮೈಸೂರು. ೧೯೬೬-೬೭. ಕವನಗಳು.

ಗೋಡೆ :- ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು. ೧೯೭೨, ೮+೮೨. ಗೋಡೆ, ಪ್ರಜ್ಞೆ ಬೆತ್ತಲೆ ಮುಂತಾದ ೫೩ ಕವನಗಳು.

ನನ್ನ ನಿನ್ನ ನಡುವೆ :- ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು. ೧೯೭೫, ೨೧೦, ಶಾರದೆ, ಕ್ರಾಂತಿಕಾರ, ಮುಂತಾದ ೧೧೭ ಆಯ್ದ ಕವನಗಳು.

ಎದೆ ತುಂಬಿ ಹಾಡಿದೆನು :- ವಾಗ್ದೇವಿ ಎಂಟರ್‌ಪ್ರೈಸಸ್, ಮೈಸೂರು. ೧೯೮೦. ೮ + ೫೬, ೪೬ ಭಾವಗೀತೆಗಳ ಸಂಗ್ರಹ

ಕಾಡಿನ ಕತ್ತಲಲ್ಲಿ :- ೩೫ ಕವನಗಳು, ೧೯೮೧.
ಪ್ರೀತಿ ಇಲ್ಲದ ಮೇಲೆ :- ೧೯೮೭. ಪ್ರೀತಿ ಇಲ್ಲದ ಮೇಲೆ, ಲಿಖಿತ, ಅವಸ್ಥೆ, ಇತ್ಯಾದಿ ೩೧ ಕವನಗಳು.

ಸಮಗ್ರ ಕಾವ್ಯ :- ಸ್ನೇಹಪ್ರಕಾಶನ, ಬೆಂಗಳೂರು. ೧೯೮೭. XXviii+೫೩೨, ಜಿ.ಎಸ್.ಎಸ್. ಅವರ ಹನ್ನೊಂದು ಕವನ ಸಂಗ್ರಹಗಳನ್ನು ಒಂದೆಡೆ ತರಲಾಗಿದೆ.

ನೂರು ಕವಿತೆಗಳು :- ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೦, ಆಯ್ದ ಒಂದುನೂರು ಕವನಗಳು.

ಚಕ್ರಗತಿ :- ಕಾಮಧೇನು, ನಂ.೬, ನಾಗಪ್ಪ ರಸ್ತೆ, ಶೇಷಾದ್ರಿಪುರ, ಬೆಂಗಳೂರು. ೧೯೯೨, ೮೬. ಸಂಭವ, ಪ್ರತಿಮೆಗಳು, ಚಕ್ರಗತಿ ಇತ್ಯಾದಿ ೩೭ ಕವನಗಳು.

## ಗದ್ಯ

ಕರ್ಮಯೋಗಿ :- ಶಾರದ ಮಂದಿರ, ಮೈಸೂರು. ೧೯೫೬. ೧೨೦ (ಐದನೆಯ ಮುದ್ರಣ ೧೯೭೯)

ವಿಮರ್ಶೆಯ ಪೂರ್ವ-ಪಶ್ಚಿಮ :- ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು. ೧೯೬೧, ೬ + ೧೫೪.

ಸೌಂದರ್ಯ ಸಮೀಕ್ಷೆ :-ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು. ೧೯೬೫, ೧೨ + ೪೨೬ + ೧೧.

ಪರಿಶೀಲನ :- ಉಷಾ ಸಾಹಿತ್ಯ ಮಾಲೆ, ಮೈಸೂರು. ೧೯೬೭, ೮ + ೧೬೮(ಮೂರನೆಯ ಮುದ್ರಣ - ೧೯೮೨).

ಗತಿಬಿಂಬ :- ಸುರುಚಿ ಪ್ರಕಾಶನ, ಮೈಸೂರು, ೧೯೭೯. ೧೬೮ (ಎರಡನೇ ಮುದ್ರಣ - ೧೯೭೪)

ಪಂಪ :- ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು. ೧೯೭೩.

ಮಾಸ್ಕೊದಲ್ಲಿ ಇಪ್ಪತ್ತೆರೆಡು ದಿನ :- ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು. ೧೯೭೩. ೧೪೪, ರಷ್ಯಾ ಪ್ರವಾಸದ ೨೨ ದಿನಗಳ ಅನುಭವದ ಚಿತ್ರಣ.

ಕನ್ನಡ ಸಾಹಿತ್ಯ ಸಮೀಕ್ಷೆ :- ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ -೧. ಬೆಂ.ವಿ.ವಿ. ಬೆಂಗಳೂರು ೧೯೭೫. ೮+೧೮೭.

ನವೋದಯ :- ಶರತ್ ಪ್ರಕಾಶನ, ಮೈಸೂರು, ೧೯೭೬. ೮+೨೧೮.

ಮಹಾಕಾವ್ಯ ಸ್ವರೂಪ :- ಕ.ವಿ.ವಿ., ಧಾರವಾಡ, ೧೯೭೬. ೮+೧೪೬.

ಅನುರಣನ:- ಶಿವಪ್ರಕಾಶನ, ಮೈಸೂರು. ೧೯೭೮, ೮+೧೭೮.

ಮಹಿಳೆ ಮತ್ತು ಕನ್ನಡ ಸಾಹಿತ್ಯ :- ಬೆಂ.ವಿ.ವಿ. ಬೆಂಗಳೂರು, ೧೯೭೯. ೬೦

ಪ್ರತಿಕ್ರಿಯೆ :- ೧೯೮೨.

ಹಿನ್ನೆಲೆ :-ಜಿ. ಕಲ್ಲಯ್ಯ ಮತ್ತು ಮಕ್ಕಳು, ಬೆಂಗಳೂರು, ೧೯೮೨,೧೪೮+೧೬

ಕಾವ್ಯಾರ್ಥ ಚಿಂತನ :- ಶಾರದ ಪ್ರಕಾಶನ, ಬೆಂಗಳೂರು, ೧೯೮೩. ೨೬೪+೮ (೮) (ಎರಡನೇ ಮುದ್ರಣ - ೧೯೮೮)

ಹೊಸಗನ್ನಡ ಕವಿತೆಗಳಲ್ಲಿ ಕಾವ್ಯ ಚಿಂತನೆ - ಕೆಲವು ಪ್ರತಿಕ್ರಿಯೆಗಳು :- ಶ್ರೀ ಕುವೆಂಪು ವಿದ್ಯಾ ಪರಿಷತ್, ಮೈಸೂರು, ೪+೫೬.

ಶ್ರೀ ಕುವೆಂಪು - 'ರಸಚಿಂತನೆಯ ಮಿಂಚುಗಳು', ಶ್ರೀ ಕುವೆಂಪು ವಿದ್ಯಾಪರಿಷತ್, ಕವಿಶೈಲ, ಜಯಲಕ್ಷ್ಮೀಪುರಂ, ಮೈಸೂರು, ೧೯೮೭.

ಕನ್ನಡ ಕವಿಗಳ ಕಾವ್ಯ ಕಲ್ಪನೆ :- ನಿರ್ದೇಶಕ, ಪ್ರಸಾರಾಂಗ, ಮೈಸೂರು. ವಿ.ವಿ. ಮೈಸೂರು, ೧೯೯೯, ೧೦+೮೮

ಬೆಡಗು :- ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೮೯. ೮+೧೬೮.

ಸಮಗ್ರಗದ್ಯ :- ಸಂಪುಟ -೧, ಶಾರದಾ ಪ್ರಕಾಶನ, ಬೆಂಗಳೂರು, ೧೯೯೩, ಪು ೧೨+೪೪೪.

ಈ ಮೊದಲೇ ಪ್ರಕಟಗೊಂಡಿರುವ 'ಪರಿಶೀಲನ', 'ಅನುಕರಣನ', 'ಪ್ರತಿಕ್ರಿಯೆ' ಮತ್ತು 'ಬೆಡಗು' ಎಂಬ ಸಂಕಲನಗಳಿಂದ ಎತ್ತಿಕೊಂಡ ಲೇಖನಗಳನ್ನು ಒಳಗೊಂಡಿದೆ.

ಸಮಗ್ರ ಗದ್ಯ :- ಸಂಪುಟ - ೨, ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೪. ೮+೪೩೨.

ಈಗಾಗಲೇ ಪ್ರಕಟಗೊಂಡಿರುವ 'ಗತಿಬಿಂಬ', 'ನವೋದಯ', 'ಪ್ರತಿಕ್ರಿಯೆ' ಮತ್ತು 'ಬೆಡಗು' ಸಂಗ್ರಹಗಳಿಂದ ಆಯ್ದ ಲೇಖನಗಳನ್ನು ಒಳಗೊಂಡಿದೆ.

# ಸಂಪಾದಿತ ಕೃತಿಗಳು

## ಕಾವ್ಯ

ಷಡಕ್ಷರ ದೇವ - ಶಬರಶಂಕರನ ವಿಳಾಸ ಪ್ರಬಂಧಂ (ಸಂಗ್ರಹ) ಅಚ್ಯುತ ಸಾಹಿತ್ಯಮಾಲೆ, ಮೈಸೂರು, ೧೯೫೫. ೪೭+೬೬.

ಕಾವ್ಯಲಹರಿ :- ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂ.ವಿ.ವಿ. ಬೆಂಗಳೂರು, ೧೯೬೮. ೮+೧೨೩(ಎರಡನೇ ಮುದ್ರಣ ೧೯೭೩) ಶಾಸನ ಪದ್ಯಗಳಿಂದ ಆರಂಭಗೊಂಡು ಆಧುನಿಕ ಕೆಲವು ಕಾವ್ಯ ಭಾಗಗಳ ಸಂಕಲನ.

ಚಿನ್ನದಗೆರೆ:- ಕರ್ನಾಟಕ ಸಂಘ, ಬೆಂಗಳೂರು, ೧೯೬೮. ೨+೫೮+೪, ಸೆಂಟ್ರಲ್ ಕಾಲೇಜ್, ಕರ್ನಾಟಕ ಸಂಘ ಸುವರ್ಣ ಮಹೋತ್ಸವದ ನೆನಪಿಗಾಗಿ ಪ್ರಕಟಿಸಿದ ಬೆಂಗಳೂರು ವಿ.ವಿ. ವಿದ್ಯಾರ್ಥಿಗಳ ಪ್ರಾತಿನಿಧಿಕ ಕವನ ಸಂಗ್ರಹ.

ಕಾವ್ಯ ಸಂಪುಟ :- ಬೆಂ.ವಿ.ವಿ. ಬೆಂಗಳೂರು, ೧೯೭೦. ೮+೧೨೮.

ಹಳಗನ್ನಡ ಕಾವ್ಯ ಸಂಗ್ರಹ ಭಾಗ -೧ :- ಬೆಂ. ವಿ.ವಿ, ಬೆಂಗಳೂರು. ೧೯೭೭. ೮+೫೨, ಆಯ್ದ ಭಾಗಗಳು.

ಹಳಗನ್ನಡ ಕಾವ್ಯ ಸಂಗ್ರಹ ಭಾಗ - ೨ :- ಬೆಂಗಳೂರು ವಿ.ವಿ., ಬೆಂಗಳೂರು, ೧೯೭೮. ೧೦+೮೮, ಆಯ್ದ ಭಾಗಗಳು.

ಸಮಕಾಲೀನ ಕನ್ನಡ ಕವಿತೆ :- ಬೆಂ.ವಿ. ವಿ. ಬೆಂಗಳೂರು, ೧೯೮೦. ೮+೧೨೪.

ಮಧ್ಯಕಾಲೀನ ಕನ್ನಡ ಕವಿತೆ -ಭಾಗ-೧ :-ಬೆಂ. ವಿ.ವಿ., ಬೆಂಗಳೂರು, ೧೯೭೮. ೮+೧೦೬.

ಮಧ್ಯಕಾಲೀನ ಕನ್ನಡ ಕವಿತೆ ಭಾಗ -೨ :- ಬೆಂ. ವಿ.ವಿ., ಬೆಂಗಳೂರು, ೧೯೮೦, ೧೬೪.

## ಗದ್ಯ

ಸಾಹಿತ್ಯ ವಿಮರ್ಶೆ - ಕ.ವಿ.ವಿ., ಧಾರವಾಡ, ೧೯೬೯. ೮+೧೪೪ (ಎರಡನೆಯ ಮುದ್ರಣ - ೧೯೭೬), ಆರು ಉಪನ್ಯಾಸಗಳು.

ಕವಿ ಹೃದಯ - ಕ.ಸಾ.ಪ., ಬೆಂಗಳೂರು, ೧೯೬೯. ೧೨೦, ಐದು ವಿಮರ್ಶಾ ಲೇಖನಗಳು.

ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ - ಕನ್ನಡ ವಿಭಾಗದ ಪ್ರಕಟಣೆ - ೫, ಬೆಂ.ವಿ.ವಿ., ಬೆಂಗಳೂರು, ೧೯೭೧, ೧೫೬, ವಿಚಾರ ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧಗಳು.

**ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು** – ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೭೨, ೮+೨೨೨: (೧೯೭೧ನೇ ಮಾರ್ಚ್ ೨೮, ೨೯ ಮತ್ತು ೩೦ ರಂದು ನಡೆದ ವಿಚಾರ ಸಂಕಿರಣದಲ್ಲಿ ಓದಿದ ಹದಿನೈದು ಪ್ರಬಂಧಗಳು)

**ಚಂದವ** – ಕೆ.ಎಸ್. ನರಸಿಂಹಸ್ವಾಮಿ ಅಭಿನಂದನ ಸಮಿತಿ, ಬೆಂಗಳೂರು, ೧೯೭೨, ೧೦+೨೪೯. (ಕೆ.ಎಸ್. ನರಸಿಂಹಸ್ವಾಮಿ ಅಭಿನಂದನ ಗ್ರಂಥ)

**ವಾಕ್ಯ ಮಾಣಿಕ್ಯ ಕೋಶ** – ಬೆಂ. ವಿ.ವಿ., ೧೯೭೨, ೮+೨೦೨. ಕನ್ನಡ ಕೆಲವು ಕೃತಿಗಳಿಂದ ಆರಿಸಿದ ಸುಮಾರು ೨೫೦೦ ಕ್ಕೂ ಹೆಚ್ಚಿನ ಉಕ್ತಿಗಳು.

**ಟಾಲ್‌ಸ್ಟಾಯ್ ವಿಚಾರಧಾರೆ** – (ಅನುವಾದ) ಬೆಂ. ವಿ.ವಿ., ಬೆಂಗಳೂರು. ೧೯೭೩, ೧೬+೩೯೬ (ಪ್ರಬಂಧ).

**ಸಾಹಿತ್ಯ ವಾರ್ಷಿಕ ೧೯೭೧** – ಕ.ಅ. ಕೇಂದ್ರ, ಬೆಂ.ವಿ.ವಿ. ಬೆಂ. ೧೯೭೩, ೧೨+೩೧೮ (೧೯೭೧ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

**ಸಾಹಿತ್ಯ ವಾರ್ಷಿಕ** – ೧೯೭೨ –ಕನ್ನಡ ಅಧ್ಯಯನ ಕೇಂದ್ರ, ಬೆಂ.ವಿ.ವಿ., ಬೆಂಗಳೂರು. ೧೯೭೩, ೧೨+೫೩೮. (೧೯೭೨ನೆಯ ಸಾಲಿನಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

**ಸಾಹಿತ್ಯ ವಾರ್ಷಿಕ ೧೯೭೩** – ಕ.ಅ. ಕೇಂದ್ರ, ಬೆಂ. ವಿ.ವಿ., ಬೆಂಗಳೂರು. ೧೯೭೪, ೮+೩೩೮. (೧೯೭೩ ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

**ಚಿಂತನ ದೀಪ್ತಿ** – ಜನ್ಮ ಭೂಮಿ ಟ್ರಸ್ಟ್ ಪ್ರಕಟಣ ಮಾಲೆ - ೨, ಬೆಂ.ವಿ.ವಿ., ಬೆಂಗಳೂರು. ೧೯೭೪, ೧೭೫.

**ಪಂಪ : ಒಂದು ಅಧ್ಯಯನ** – ಬೆಂ. ವಿ.ವಿ. ಬೆಂಗಳೂರು. ೧೯೭೪. ಹದಿನೈದು ವಿಮರ್ಶಾ ಲೇಖನಗಳು.

**ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ** – ಸಂಪುಟ -೧, ಬೆಂ.ವಿ.ವಿ. ಬೆಂಗಳೂರು. ೧೯೭೪, ೧೦+೧೭೦ (ಪ್ರಾರಂಭದಿಂದ ಕ್ರಿ.ಶ. ೮೫೦ ರವರೆಗೆ)

**ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ** – ಸಂಪುಟ -೨. ಬೆಂ.ವಿ.ವಿ., ಬೆಂಗಳೂರು. ೧೯೭೫. ೧೦+೩೬೨, (ಕ್ರಿ.ಶ. ೮೫೦ ರಿಂದ ಕ್ರಿ.ಶ. ೧೧೫೦ ರವರೆಗೆ)

**ಅರವಿಂದ ದರ್ಶನ** – ಬೆಂ. ವಿ.ವಿ., ಬೆಂಗಳೂರು. ೧೯೭೫, ೮+೮೦.

**ಕನ್ನಡ ವಿಮರ್ಶೆಯ ನೆಲೆ–ಬೆಲೆ** – ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೭೫, ೮+೧೭೪.

**ಕವಿಬೇಂದ್ರೆ** – ಬೆಂ. ವಿ.ವಿ., ಬೆಂಗಳೂರು. ೧೯೭೫, ೮+೧೪೨. ಬೇಂದ್ರೆಯವರ ಕೃತಿಗಳನ್ನು ಕುರಿತ ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು.

ಸರ್ವಜ್ಞ - ಒಂದು ಸಮೀಕ್ಷೆ. ಬೆಂ.ವಿ.ವಿ., ಬೆಂಗಳೂರು. ೧೯೭೫, ೮+೧೧೨.

ಭಾರತೀಯ ಪರಂಪರೆ - ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಭಾಗ, ಬೆಂಗಳೂರು, ೧೯೭೫. ೧೨+೨೩೨. ಭಾರತೀಯ ವಿದ್ಯಾಭವನದ ಪ್ರಕಟಣೆಯಿಂದ 'ಇಂಡಿಯನ್ ಇನೆರಿಟೆನ್ಸ್' ಕೃತಿಯ ಅನುವಾದ.

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ - ಸಂಪುಟ -೩. ಬೆಂ.ವಿ.ವಿ., ಬೆಂಗಳೂರು, ೧೯೭೬, ೧೦+೭೨೮. (ಕ್ರಿ.ಶ. ೧೧೫೦ ರಿಂದ ಕ್ರಿ.ಶ. ೧೩೫೦ ರವರೆಗೆ)

ಸಾಹಿತ್ಯ ವಾರ್ಷಿಕ - ೧೯೭೪ - ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೭೬. ೮+೩.೨೦. (೧೯೭೪ರ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

ಸಾಹಿತ್ಯ ವಾರ್ಷಿಕ ೧೯೭೫ -ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೭೭. ೮+೨೧೪. (೧೯೭೫ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳು ವಿಮರ್ಶಾತ್ಮಕ ಸಮೀಕ್ಷೆ)

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ - ೪ ಭಾಗ-೧ - ಬೆಂ.ವಿ.ವಿ., ಬೆಂಗಳೂರು, ೧೯೭೭, ೮+೩೩೬ (ಕ್ರಿ.ಶ. ೧೩೫೦ ರಿಂದ ಕ್ರಿ.ಶ. ೧೬೫೦ ರವರೆಗೆ)

ವಿಚಾರ ಸಾಹಿತ್ಯ ಸಂಪುಟ -೧ - ಬೆಂ.ವಿ.ವಿ., ಬೆಂಗಳೂರು, ೧೯೭೭, ೧೪+೨೦೦.

ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ - ಬೆಂ.ವಿ.ವಿ., ಬೆಂಗಳೂರು, ೧೯೭೭. ೬+೧೧೨.

ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ - ಕ.ಅ. ಕೇಂದ್ರ, ಬೆಂ.ವಿ.ವಿ. ಬೆಂಗಳೂರು, ೧೯೭೭, ೮+೧೫೪. ಕ.ಅ. ಕೇಂದ್ರ ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು.

ಸಾಹಿತ್ಯ ವಾರ್ಷಿಕ - ೧೯೭೬ - ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೭೮. ೮+೩೪೪. (೧೯೭೬ರಲ್ಲಿ ಪ್ರಕಟಣವಾದ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ -೪ - ಭಾಗ - ೨, ಬೆಂ.ವಿ.ವಿ., ಬೆಂಗಳೂರು, ೧೯೭೮, ೮+೯೬೮. (ಕ್ರಿ.ಶ. ೧೩೫೦ ರಿಂದ ಕ್ರಿ.ಶ. ೧೬೦೦ ರವರೆಗೆ)

ವಿಮರ್ಶೆಯ ದಾರಿ - ಭಾಗ - ೧. ಬೆಂ.ವಿ.ವಿ., ಬೆಂಗಳೂರು, ೧೯೭೮. ೮+೧೨೬.

ಸಾಹಿತ್ಯ ವಾರ್ಷಿಕ - ೧೯೭೭ - ಕ.ಅ. ಕೇಂದ್ರ. ಬೆಂ. ವಿ.ವಿ., ಬೆಂಗಳೂರು, ೧೯೭೯. ೮+೩೯೦ (೧೯೭೭ ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

ವಿಮರ್ಶಾ ತತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ - ಐ.ಬಿ.ಎಚ್. ಬೆಂಗಳೂರು, ೧೯೮೦.

ಶ್ರೀ ಕುವೆಂಪು - ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೮೦. ೨೫೪. (೧೯೭೯ ಜನವರಿಯಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳು.)

**ಸಾಹಿತ್ಯ ವಾರ್ಷಿಕ** – ೧೯೭೮ – ಕ.ಅ. ಕೇಂದ್ರ, ಬೆಂ. ವಿ.ವಿ., ಬೆಂಗಳೂರು. ೧೯೮೦. ೮+೪೪೮. (೧೯೭೮ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆ)

**ಕಾವ್ಯಾರ್ಥ ಪದಕೋಶ** – ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು, ೧೯೮೦. ೮+೨೬೧. ಭಾರತೀಯ ಕಾವ್ಯ ಮೀಮಾಂಸೆಯ ಪಾರಿಭಾಷಿಕ ಪದಗಳಿಗೆ ಚಾರಿತ್ರಿಕ ಅರ್ಥ ವಿವರಣೆ.

**ಭಾರತೀಯತೆ ಮತ್ತು ಕನ್ನಡ ಲೇಖಕ** – ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು, ೧೯೮೨. ೧೧೨+೧೬. ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನಗಳು.

**ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು** – ಕ.ಸಾ. ಅಕಾಡೆಮಿ, ಬೆಂಗಳೂರು, ೧೯೯೦. ೧೪೮+೮. ವಿಮರ್ಶಾತ್ಮಕ ಬರಹಗಳ ಸಂಕಲನ.

**ರವೀಂದ್ರನಾಥ ಟಾಗೂರ್** – ಎಲ್ಲಿ ಮನ ನಿರ್ಭಯದಿ, ಅನುವಾದ

**ಪ್ರಾಯೋಗಿಕ ವಿಮರ್ಶೆ** – ಬೆಂ.ವಿ.ವಿ., ಬೆಂಗಳೂರು, ೮+೧೭೨. ಹತ್ತೊಂಬತ್ತು ವಿಮರ್ಶಾ ಲೇಖನಗಳು.

**ಕನ್ನಡ ನಾಟಕ, ಪರಂಪರೆ ಮತ್ತು ಪ್ರಯೋಗ ನಾಟಕ** – ಕ.ಅ. ಕೇಂದ್ರ, ಬೆಂ.ವಿ.ವಿ., ಬೆಂಗಳೂರು, ೧೯೭೩. ೧೦+೧೩೮. ಕನ್ನಡ ನಾಟಕ ಮತ್ತು ರಂಗಭೂಮಿ ಕುರಿತು ೧೯೭೨ನೇ ಫೆಬ್ರವರಿ ೧೧, ೧೨ ಮತ್ತು ೧೩ ರಂದು ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಹದಿಮೂರು ಪ್ರಬಂಧಗಳ ಸಂಗ್ರಹ.

**ನಾದಸೇತು ಮತ್ತು ಇತರ ನಾಟಕಗಳು** – (ರೇಡಿಯೋ ನಾಟಕಗಳು) ಸುರುತಿ ಪ್ರಕಾಶನ, ಮೈಸೂರು. ೧೯೭೭. ೧೭೪. ಐದು ಪ್ರಸಾರ ನಾಟಕಗಳು.

ಅನುಬಂಧ ೨

# ಜಿ.ಎಸ್. ಶಿವರುದ್ರಪ್ಪನವರ ಲೇಖನ ಸೂಚಿ

ಕವಿ ಸಮಯ : (ಉಪಾಯನ ಪು. ३६೫-३೭೫)

ಭರತನ ರಸ ಸೂತ್ರ : ಒಂದು ಟಿಪ್ಪಣಿ (ಕ.ಸಾ.ಪ. ೫೪-೧, ಪು. ೬೨-೬೫)

ಸ್ಫೂರ್ತಿ (ಪ್ರ.ಕ. ೪೫-೩, ಪು. ೩೧-೪೦)

ಸ್ವಭಾವೋಕ್ತಿ (ಪು. ಕ. ೩೫-೧, ಪು. ೬೫-೭೦)

ಸಮಕಾಲೀನ ಪ್ರಜ್ಞೆ (ಸುವರ್ಣ ಸಂಚಯ, ಪು. ೧೬೪-೧೭೧)

ಸಾಹಿತ್ಯ ಜೀವನದ ಗತಿಬಿಂಬ (ಪ್ರ.ಕ. ೩೭-೪, ಪು ೧೧-೧೪)

ಸಾಹಿತ್ಯದಲ್ಲಿ ಪ್ರಾಮಾಣೀಕತೆ (ಸಮನ್ವಯ ೨-೧, ಪು. ೧೪-೨೨)

ಕನ್ನಡ - ಹೊಯ್ಸಳರ ಯುಗ (ಮಾಳವಾಡ, ಸ.ಸ.) ಆಂಗ್ಲದಿಂದ ಅನು : ಜಿ.ಎಸ್.ಎಸ್ (ಕರ್ಣಾಟಕ ಪರಂಪರೆ ಸಂ:೧, ಪು. ೫೫೧-೫೫೭)

ಆಧುನಿಕ ಸಾಹಿತ್ಯದಲ್ಲಿ ಅನುಭಾವ - (ಪ್ರ.ಕ. ೩೬-೩, ಪು. ೯೫-೧೦೪)

ಮುನ್ನುಡಿ (ಮಣ್ಣಿನ ಮಿಡಿತ, ಡಿ. ಲಿಂಗಯ್ಯ)

ದಾಸರು ಶರಣರು ದರ್ಶಿಸಿದ ಸೌಂದರ್ಯ (ಪರಿಶೀಲನ, ಪು. ೮೮-೧೦೦)

ವಚನಕಾರರ ದೃಷ್ಟಿಯಲ್ಲಿ ಸಂಸ್ಕೃತಿ (ಪ್ರ.ಕ. ೩೬-೧, ಪು. ೬೯-೭೪)

ಅಂಬಿಗರ ಚೌಡಯ್ಯ (ಶ.ಸಾ. ೧೧, ೧೦-೧೧, ಪು. ೪೧೧-೪೧೮) (ಶಿವಾ ೫-೬, ಪು. ೧೪೧-೧೫೦)

ಕನಕದಾಸರ ವಿಶಿಷ್ಟತೆ :- (ಮಹಾತ್ಮ ಕನಕದಾಸ ಪ್ರಶಸ್ತಿ, ಪು-೧೪೦-೧೪೮) (ಪರಿಶೀಲನ - ಪು. ೧೦೧-೧೧೧)

ಅಕ್ಷಯ ವಸ್ತ್ರ :- (ಪ್ರ.ಕ. ೪೩-೨, ಪು. ೧೭೫-೧೯೫; ೪೩-೩, ಪು. ೩-೨೭)

ಪಂಪನ ಸಮರಸದೃಷ್ಟಿ (ಕ.ನು. ೩೮-೧) (ಪರಿಶೀಲನ ಪು. ೧೨-೧೮)

ಪಂಪನ ಪುಷ್ಪೋದ್ಯಾನ (ಪರಿಶೀಲನ ಪು. ೧-೧೧)

ಭರತನ ವಿಜಯ ಪ್ರಶಸ್ತಿ (ಶ್ರದ್ಧಾಂಜಲಿ ಪು. ೧೦೫-೧೧೦)

ಪಂಪನಲ್ಲಿ ಭಗವದ್ಗೀತೆ (ಪ್ರ.ಕ. ೪೬-೩, ಪು. ೧-೧೦) (ಪರಿಶೀಲನ ಪು. ೧೯-೩೧)

ಈ ಪರಿಯ ಸೊಬಗು (ಪುರಂದರದಾಸ) (ಪರಿಶೀಲನ, ಪುಟ-೮೩-೮೭)

ಕನ್ನಡಕ್ಕೆ ಬಸವ ನಿಧಿ (ಪ್ರ.ಕ. ೪೨-೧, ಪು. ೭೭-೮೨)

ಕನ್ನಡಕ್ಕೆ ಬಸವಣ್ಣನವರ ಕಾಣಿಕೆ (ಶ್ರೀ ಶಿವಯೋಗ ಮಂದಿರ,ಬೆಳಗು, ಪು. ೫೫)

ರತ್ನಾಕರನ ಭೋಗ ಯೋಗದ ತೊಡಕು (ಪ್ರ.ಕ. ೪೭ - ೪) (ಪರಿಶೀಲನ, ಪು. ೧೩೨-೧೬೪)

ಪರಂಪರೆ ಮತ್ತು ರಾಘವಾಂಕನ ಪ್ರತಿಭೆ (ಪ್ರಸಾದ, ಪು. ೩೦೫-೩೨೦)

ಸತ್ಯಸಾಧಕ ಹರಿಶ್ಚಂದ್ರ (ಪ್ರ.ಕ. ೩೭-೧, ೩-೧೪) (ದರ್ಶನ ವಿಮರ್ಶೆ, ಪು. ೬೩-೭೯)

ಪೀಠಿಕೆ (ಷಡಕ್ಷರ ಕವಿಯ ಶಬರಶಂಕರ ವಿಳಾಸ ಪ್ರಬಂಧಂ (ಸಂಗ್ರಹ), ೧೯೫೫)

ಹರಿಹರನ ಬಸವರಾಜದೇವರ ರಗಳೆ - ಒಂದು ಸಮೀಕ್ಷೆ (ಕ.ಸಾ.ಪ. ೫೩, ೧-೨, ಪು. ೧.೨೭)
(ಕವಿ ಹೃದಯ, ಪು. ೩-೪೬)

ಕನ್ನಡ ಕಾದಂಬರಿಗಳಲ್ಲಿ ಭಾಷೆ - ಶೈಲಿ (ಪ್ರ.ವಾ. ೨೫-೧೧-೧೯೬೨, ಸಾಪು, ಪು-೫)

ಮರ್ಯಾದೆಯ ಮಹಲು (ಪ್ರ.ಕ. ೩೪-೪, ಕಾಲೋ, ಪು. ೭೧-೭೫)

ಕವಿ ಮತ್ತು ಕಾಲಧರ್ಮ (ಜೀ. ಜನವರಿ ೧೯೭೯, ಪು. ೩೬-೩೮)

ಕವಿಯಲ್ಲಿ ವಿಶಿಷ್ಟತೆ (ಸಮೀಕ್ಷಕ -೨, ಪು. ೮೫-೯೪)

ಕಾವ್ಯದಲ್ಲಿ ನಿಯತಿಕೃತ ನಿಯಮರಾಹಿತ್ಯ (ಸವಿನೆನಪು, ಪು. ೪೫೮-೪೬೩)

ಕಾವ್ಯದಲ್ಲಿ ವಾಸ್ತವಿಕತೆ ಮತ್ತು ನವ್ಯತೆ (ಬಾಗಿನ, ಪು. ೭೫-೮೫)

ರೊಮ್ಯಾಂಟಿಕ್ ಕಾವ್ಯ ಎಂದರೇನು? (ಸಮನ್ವಯ, ಏಪ್ರಿಲ್ ೧೯೭೦, ೩-೧, ಪು. ೧೭-೨೪)

ಈ ಮೂರು ವರ್ಷದ ಕವಿತೆ - ಸಮೀಕ್ಷೆ (ಸಂಕ್ರಮಣ - ೪೧, ಪು. ೫೩-೬೦)

ಕನ್ನಡ ಕಾವ್ಯ (ಕಳೆದ ಇಪ್ಪತ್ತೈದು ವರ್ಷಗಳಲ್ಲಿ) (ಕನ್ನಡದ ಕಾಲು ಶತಮಾನ, ಪು. ೧೫೩-೧೬೭)

ಕಾವ್ಯ (ಕ.ನು. ೨೯-೫, ಪು. ೯-೧೧)

ಹೊಸಕಾವ್ಯದ ಹೊಯ್ದಾಟ (ಗತಿಬಿಂಬ, ಪು. ೬೧-೭೪)

ಹೊಸಗನ್ನಡ ಕಾವ್ಯ (ಚಿನ್ನದ ಬೆಳಸು, ಭಾಗ-೧, ಹೊಂದೆನೆ-೧, ಪು. ೧೪-೨೫)

ಭಾವಗೀತೆ (ಸಾಹಿತ್ಯ ಸಮೀಕ್ಷೆ, ಪು. ೬೬-೮೪)

ಸಮುದ್ರಗೀತೆಗಳು (ವಿನಾಯಕ ವಾಙ್ಮಯ, ಪು-೧೧೭-೧೨೮)

ಪು.ತಿ.ನ. ಅವರ ಕಾವ್ಯ ಜಿಜ್ಞಾಸೆ (ಪ್ರ.ಕ. ೪೦-೨, ಪು. ೩-೧೪)

ಪು.ತಿ.ನ. ಅವರ ಪ್ರತೀಕ್ಷೆ (ಪ್ರಾಯೋಗಿಕ ವಿಮರ್ಶೆ, ಪು. ೬೩-೬೮)

ಪು.ತಿ.ನ. ಅವರ ವಿಶಿಷ್ಟತೆ (ಸಮನ್ವಯ, ನವೆಂಬರ್ ೧೯೬೭, ಪು. ೨೭-೩೪)

ಹಸುರು (ಪಕ್ಷಿಕಾಶಿಯಿಂದ) (ಸಾಹಿತ್ಯರಾಧನೆ, ಪು. ೫೪-೫೮)

ಶ್ರೀರಾಮಾಯಣ ದರ್ಶನದಲ್ಲಿ ಪ್ರಾರ್ಥನಾಶಕ್ತಿ (ಅವಲೋಕನ, ಪು. ೬೪-೭೯)

ಕಾವ್ಯಸೃಷ್ಟಿ ಬೇಂದ್ರೆಯವರ ದೃಷ್ಟಿ (ಪ್ರ.ಕ. ೩೮-೪, ಪು. ೧೨೫-೧೩೩)

ರಂಗ ಬಿನ್ನಪ (ಸಿ.ಗಂ. ೬-೧, ಪು. ೧೪-೧೭)

ರಸಗಂಗೆ (ಕವನ ಸಂಗ್ರಹ) (ಪ್ರ.ಕ. ೪೪-೧, ಕಾಲೋ ಪು. ೧೩೭-೧೩೯)

ಒಂದು ಚಿರಂತನ ಕೃತಿ (ಮನೆ ತುಂಬಿಸುವುದು) (ರೂಪಾರಾಧಕ, ಪು-೪೩-೪೯)

ಗೀತಗಳು - ದೀಪಗಳು (ವಿ.ಸೀ., ಪು. ೬೯-೮೩)

ಬಸವಣ್ಣನವರ ವಚನಗಳಲ್ಲಿ ಕಾವ್ಯ ಸೌಂದರ್ಯ (ಹಾ.ಮಾ. ನಾಯಕ (ಸಂ), ಬಸವ ಪುರುಷ, ಮೈಸೂರು ವಿ.ವಿ., ಕ.ಅ. ಸಂ. ೧೯೭೫)

ಕವಿ ಸರ್ವಜ್ಞ (ಸರ್ವಜ್ಞ ಒಂದು ಸಮೀಕ್ಷೆ, ಬೆಂ.ವಿ.ವಿ., ೧೯೭೫)

ಶ್ರೀ ಅರವಿಂದರಿಗೆ (ಅರವಿಂದ ದರ್ಶನ, ಬೆಂ.ವಿ.ವಿ., ೧೯೭೫)

ಕೆ.ಎಸ್.ನ ಅವರ ಪ್ರಣಯಗೀತೆಗಳು (ಚಂದನ, ಕೆ.ಎಸ್.ನ. ಅಭಿನಂದನಗ್ರಂಥ, ಬೆಂಗಳೂರು, ೧೯೭೨)

ಕಾದಂಬರಿ (ಸಾಹಿತ್ಯ ವಾರ್ಷಿಕ - ೧೯೭೧, ಬೆಂ.ವಿ.ವಿ. ೧೯೭೩)

ಕಾವ್ಯಮೀಮಾಂಸೆ -೧ (ಮಳಲಿವಸಂತ ಕುಮಾರ್ - ಕುವೆಂಪು ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆ, ಮೈಸೂರು, ೧೯೭೨)

ಪ್ರತಿಭೆ ಹಾಗೂ ಸ್ಫೂರ್ತಿ, ರಸಾನುಭವದ ಸ್ವರೂಪ, ಸೌಂದರ್ಯ, ಅದ್ಭುತ, (ವಿಮರ್ಶಾ ತತ್ವಗಳು ಮತ್ತು ಪ್ರಾಯೋಗಿಕಾ ವಿಮರ್ಶೆ, ಬೆಂಗಳೂರು, ೧೯೮೦)

ಕನ್ನಡ ಸಾಹಿತ್ಯ ಮತ್ತು ಕನ್ನಡ (ವಿಚಾರ ಸಾಹಿತ್ಯ ,ಬೆಂ.ವಿ.ವಿ. ೧೯೭೭)

ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ (ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ, ಬೆಂ.ವಿ.ವಿ., ೧೯೭೭)

ಹರಿಹರನ ಬಸವರಾಜದೇವರ ರಗಳೆ (ಕವಿ ಹೃದಯ, ಕ.ಸಾ.ಪ., ೧೯೬೯)

ಅನುಬಂಧ ೩

# ಜಿ.ಎಸ್.ಎಸ್. ಅವರ ಜೀವನದ ಮಹತ್ವದ ಘಟನೆಗಳು

ಜನನ : ೧೯೨೬, ಫೆಬ್ರುವರಿ, ದಿನಾಂಕ ೭
ಈಸೂರು, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

ಶಿಕ್ಷಣ : ಪ್ರಾಥಮಿಕ - ಹೊನ್ನಾಳಿ ಮತ್ತು ಕೋಟೆಹಾಳ್
ಮಾಧ್ಯಮಿಕ - ರಾಮಗಿರಿ ಮತ್ತು ಬೆಲಗೂರು
ಪ್ರೌಢಶಾಲೆ - ದಾವಣಗೆರೆ ಮತ್ತು ಗುಬ್ಬಿ
ಇಂಟರ್‌ಮೀಡಿಯೇಟ್ - ತುಮಕೂರು
ಆಹಾರ ಇಲಾಖೆಯಲ್ಲಿ - ಗುಮಾಸ್ತೆ

೧೯೪೯ : ಬಿ.ಎ. ಆನರ್ಸ್, ಪ್ರಥಮ ದರ್ಜೆಯಲ್ಲಿ ಪ್ರಥಮ ವರ್ಗ
(ಎರಡು ಸುವರ್ಣ ಪದಕಗಳು ಹಾಗೂ ಒಂದು ಬಹುಮಾನ)
ದಾವಣಗೆರೆಯ ಡಿ.ಆರ್.ಎಂ. ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ.

೧೯೫೩ ಎಂ.ಎ. ಪ್ರಥಮದರ್ಜೆ, ತರಗತಿಗೆ ಪ್ರಥಮ
(ಎರಡು ಸುವರ್ಣ ಪದಕಗಳು ಹಾಗೂ ಒಂದು ಬಹುಮಾನ)

೧೯೬೦ : ಪಿಎಚ್.ಡಿ. 'ಸೌಂದರ್ಯ ಸಮೀಕ್ಷೆ' ಎಂಬ ಮಹಾಪ್ರಬಂಧಕ್ಕೆ .
ಮಾರ್ಗದರ್ಶಕರು: ಡಾ. ಕೆ.ವಿ. ಪುಟ್ಟಪ್ಪ

## ಅಧ್ಯಾಪನ ಮತ್ತು ಇತರೆ

೧೯೬೦-೧೯೬೩ ಅಧ್ಯಾಪಕರು, ಮಾನಸಗಂಗೋತ್ರಿ, ಮೈಸೂರು

೧೯೬೩ ತುಮಕೂರಿನಲ್ಲಿ (ಸಿದ್ಧಗಂಗಾ) ನಡೆದ ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷ. ಇದೇ ವರ್ಷ ದೆಹಲಿಯ ರಾಷ್ಟ್ರೀಯ ಕವಿ ಮೇಳದಲ್ಲಿ ಕರ್ನಾಟಕದ ಪ್ರತಿನಿಧಿ.

| | |
|---|---|
| ೧೯೬೩-೧೯೬೫ | ಕನ್ನಡ ವಿಭಾಗದ ಮುಖ್ಯಸ್ಥ ಹಾಗೂ ಉಪಪ್ರಾಧ್ಯಾಪಕ ಉಸ್ಮಾನಿಯ ವಿ.ವಿ. ಹೈದರಾಬಾದ್. |
| ೧೯೬೫-೬೬ | ರೀಡರ್ ಮತ್ತು ವಿಭಾಗದ ಮುಖ್ಯಸ್ಥರು. ಮಹಾರಾಜ ಕಾಲೇಜು, ಮೈಸೂರು. |
| ೧೯೬೬-೭೦ | ರೀಡರ್, ಬೆಂಗಳೂರು ವಿ.ವಿ. ಬೆಂಗಳೂರು. |
| ೧೯೭೦ | ಪ್ರಾಧ್ಯಾಪಕ ಮತ್ತು ಮುಖ್ಯಸ್ಥರು. ಕ.ಅ. ಕೇಂದ್ರ. ಬೆಂ.ವಿ.ವಿ. ಬೆಂಗಳೂರು. |
| ೧೯೭೧ | ನಿರ್ದೇಶಕರು. ಕ.ಅ. ಕೇಂದ್ರ. ಬೆಂ.ವಿ.ವಿ. ಬೆಂಗಳೂರು |
| ೧೯೭೨ | ಸೆಪ್ಟೆಂಬರ್‌ನಲ್ಲಿ ಭಾರತ ಹಾಗೂ ಸೋವಿಯಟ್ ಸಾಂಸ್ಕೃತಿಕ ವಿನಿಮಯ ಯೋಜನೆಯಲ್ಲಿ, ರಷ್ಯಾದಲ್ಲಿ ಪ್ರವಾಸ. |
| ೧೯೭೩ | 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ' ಎಂಬ ಕೃತಿಗೆ ಸೋವಿಯಟ್ ಲ್ಯಾಂಡ್ ನೆಹರೂ ಪ್ರಶಸ್ತಿ. |
| ೧೯೭೭ | ಜಿ.ಎಸ್.ಎಸ್. ಅವರಿಗೆ 'ಸ್ನೇಹಕಾರ್ತೀಕ' ಅಭಿನಂದನ ಗ್ರಂಥಾರ್ಪಣೆ. |

## ಪ್ರಕಟಣೆಗಳು : ಕವನ ಸಂಗ್ರಹಗಳು

| | |
|---|---|
| ೧೯೫೧ | ಸಾಮಗಾನ |
| ೧೯೫೩ | ಚೆಲುವು ಒಲವು |
| ೧೯೫೪ | ಸಂಜೆದಾರಿ |
| ೧೯೫೬ | ದೇವಶಿಲ್ಪ |
| ೧೯೫೯ | ದೀಪದ ಹೆಜ್ಜೆ |
| ೧೯೬೦ | ತೀರ್ಥವಾಣಿ |
| ೧೯೬೧ | ಕಾರ್ತೀಕ |
| ೧೯೬೩ | ಅನಾವರಣ |
| ೧೯೬೬ | ತೆರೆದದಾರಿ |
| ೧೯೭೨ | ಗೋಡೆ |
| ೧೯೭೫ | ನನ್ನ ನಿನ್ನ ನಡುವೆ |
| ೧೯೮೦ | ಎದೆ ತುಂಬಿ ಹಾಡಿದೆನು |
| ೧೯೮೧ | ಕಾಡಿನ ಕತ್ತಲಲ್ಲಿ |

೧೯೮೭ ಪ್ರೀತಿ ಇಲ್ಲದ ಮೇಲೆ
೧೯೯೦ ನೂರು ಕವಿತೆಗಳು
೧೯೯೨ ಚಕ್ರಗತಿ

## ಗದ್ಯ ಕೃತಿಗಳು

೧೯೫೬ ಕರ್ಮಯೋಗಿ
೧೯೬೧ ವಿಮರ್ಶೆಯ ಪೂರ್ವ-ಪಶ್ಚಿಮ
೧೯೬೫ ಸೌಂದರ್ಯ ಸಮೀಕ್ಷೆ
೧೯೬೭ ಪರಿಶೀಲನ
೧೯೬೯ ಗತಿಬಿಂಬ
೧೯೭೩ ಪಂಪ
೧೯೭೫ ಕನ್ನಡ ಸಾಹಿತ್ಯ ಸಮೀಕ್ಷೆ
೧೯೭೬ ನವೋದಯ
೧೮೭೬ ಮಹಾಕಾವ್ಯ ಸ್ವರೂಪ
೧೯೭೮ ಅನುರಣನ
೧೯೭೮ ಪ್ರತಿಕ್ರಿಯೆ
೧೯೭೯ ಮಹಿಳೆ ಮತ್ತು ಕನ್ನಡ ಸಾಹಿತ್ಯ
೧೯೮೨ ಹಿನ್ನೆಲೆ
೧೯೮೩ ಕಾವ್ಯಾರ್ಥ ಚಿಂತನ
೧೯೮೩ ಹೊಸಗನ್ನಡ ಕವಿತೆಗಳಲ್ಲಿ ಕಾವ್ಯ ಚಿಂತನೆ: ಕೆಲವು ಪ್ರತಿಕ್ರಿಯೆಗಳು
೧೯೮೭ ಶ್ರೀ ಕುವೆಂಪು : ರಸಚಿಂತನೆಯ ಮಿಂಚುಗಳು
೧೯೮೯ ಕನ್ನಡ ಕವಿಗಳ ಕಾವ್ಯ ಕಲ್ಪನೆ
೧೯೮೯ ಬೆಡಗು

ಅನುಬಂಧ ೪

# ಗ್ರಂಥ ಋಣ


| | | |
|---|---|---|
| ಅನಂತನಾರಾಯಣ ಎಸ್. | : | ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ. |
| ಡಾ. ಪ್ರಭುಶಂಕರ | : | ಕನ್ನಡದಲ್ಲಿ ಭಾವಗೀತೆ |
| ರಾಜಗೋಪಾಲ ಕ.ವೆಂ. | : | ಕಾವ್ಯರಚನಾಶಿಲ್ಪ - ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು. |
| ಡಾ. ಶಿವರುದ್ರಪ್ಪ ಜಿ.ಎಸ್. | : | ಅವರ ಎಲ್ಲಾ ಕೃತಿಗಳು (ನೋಡಿ: ಕೃತಿಸೂಚಿ) |
| ವಿದ್ಯಾಶಂಕರ್ ಎಸ್. ಮತ್ತು ಇತರರು (ಸಂ) | : | ಸ್ನೇಹ ಕಾರ್ತೀಕ |
| ಹಿರೇಮಠ ಎ.ಬಿ. ಮತ್ತು ಇತರರು (ಸಂ) | : | ಚೆನ್ನವೀರ ಕಣವಿ ಮತ್ತು ಜಿ.ಎಸ್. ಶಿವರುದ್ರಪ್ಪ ಅವರ ಕಾವ್ಯ (ತೌಲನಿಕ ವಿವೇಚನೆ) |
| ಜಿ.ಎಸ್. ಸಿದ್ದಲಿಂಗಯ್ಯ, ಎಂ.ಎಚ್. ಕೃಷ್ಣಯ್ಯ (ಸಂ) | : | ಸಾಲುದೀಪಗಳು |
| ತೀ. ನಂ. ಶಂಕರನಾರಾಯಣ | : | ಸಾಧನೆ, ಸಂಪುಟ - ೧೩. ಸಂಚಿಕೆ - ೨ ಪು. ೮೨-೯೩ |

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು